# ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ)

ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

ಅರ್ಚನಾ

ನೋಂದಣಿ ಸಂಖ್ಯೆ: **KTSMDS/00549**

ಮಾರ್ಗದರ್ಶಕರು

ಡಾ. ಗಾಂವ್ಕರ್ ಗೋಪಾಲಕೃಷ್ಣ ಎಂ

೨೦೧೨



ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು-೫೭೫೦೦೧

# ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ)

ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

ಅರ್ಚನಾ

ನೋಂದಣಿ ಸಂಖ್ಯೆ: **KTSMDS/00549**

ಮಾರ್ಗದರ್ಶಕರು

ಡಾ. ಗಾಂವ್ಕರ್ ಗೋಪಾಲಕೃಷ್ಣ ಎಂ

೨೦೧೨

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು-೫೭೫೦೦೧

# ಯೋಗ್ಯತಾ ಪತ್ರ

ಅರ್ಚನಾ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **'ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ದಪಡಿಸಿರುತ್ತಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ.

ಸ್ಥಳ : ಉಡುಪಿ

ದಿನಾಂಕ : 25-06-2012

**ಡಾ। ಗಾಂವ್ಕರ್ ಗೋಪಾಲಕೃಷ್ಣ ಎಂ**

ಸಂಶೋಧನಾ ಮಾರ್ಗದರ್ಶಕರು

## ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರ ಪಡಿಸಿದ **'ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಒಂದು ಅಧ್ಯಯನ'** ಎಂಬ ಈ ಸಂಪ್ರಂಬಂಧವು ನನ್ನ ಸ್ವಂತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲಶ್ರುತಿಯಾಗಿದೆ. ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ। ಗಾಂವ್ಕರ್ ಗೋಪಾಲಕೃಷ್ಣ ಎಂ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢೀಕರಿಸುತ್ತೇನೆ.

Archana

**ಅರ್ಚನಾ**
ಸಂಶೋಧಕರು

**ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ**

**ಅಧ್ಯಯನದ ವಿವರಗಳು**

# ಕೋಷ್ಟಕಗಳ ಪಟ್ಟಿ

## ರೇಖಾಚಿತ್ರಗಳ ಪಟ್ಟಿ



## ನಕ್ಷೆಗಳ ವಿವರ

# ಅಧ್ಯಾಯ ೧

# ಪೀಠಿಕೆ, ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ೧.೧ ಪೀಠಿಕೆ:

ಮಹಿಳೆಯರನ್ನು ಕುರಿತ ಚಿಂತನೆ, ವಿಶ್ಲೇಷಣೆ ಮತ್ತು ಬರಹಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿರುವುದು ಲಿಂಗ ಸಮಾನತೆಯ ಬಗ್ಗೆ ಕಾಳಜಿಯನ್ನು ಹೊಂದಿರುವವರಿಗೆ ಸಂತೋಷ ಹಾಗೂ ಸಮಾಧಾನಗಳೆರನ್ನೂ ತಂದು ಕೊಟ್ಟಿರುವಂತಹ ವಿಷಯವಾಗಿದೆ. ಸಮಾಜದ ವಿವಿಧ ಸಂಸ್ಥೆಗಳಲ್ಲಿ ಹಾಸು ಹೊಕ್ಕಾಗಿರುವ ಲಿಂಗ ಅಸಮಾನತೆಯನ್ನು ಬೇರು ಸಮೇತ ಕಿತ್ತೊಗೆಯಬೇಕಾದರೆ ಮಹಿಳಾ ವಿಚಾರಗಳಿಗೆ ಸ್ಪಂದಿಸುವಂಥ ಮನಸ್ಸನ್ನು ಬೆಳೆಸಿಕೊಳ್ಳುವುದು ಅಗತ್ಯವಾಗಿದೆ. ಮಹಿಳೆ, ಸಂಸ್ಕೃತಿ ಮತ್ತು ಸಮಾಜ ಈ ಮೂರು ಪರಿಕಲ್ಪನೆಗಳೂ ಒಂದಕ್ಕೊಂದು ನಿಕಟವಾಗಿ ಸಂಬಂಧಪಟ್ಟಿರತಕ್ಕಂಥವು. ಸಮಾಜ ಎಂದರೆ ಸಾಮಾಜಿಕ ಸಂಬಂಧಗಳ ಒಂದು ಬಲೆ, ಸಂಸ್ಕೃತಿ ಎನ್ನುವುದು ಈ ಸಮಾಜದ ಒಟ್ಟು ಜೀವನ ಶೈಲಿಯನ್ನು ಪ್ರತಿಬಿಂಬಿಸುವಂಥ ಒಂದು ವ್ಯವಸ್ಥೆ. ಸಂಸ್ಕೃತಿ ಮತ್ತು ಸಮಾಜಗಳೆರಡೂ ಸ್ಥಿರವಾದ ವ್ಯವಸ್ಥೆಗಳಲ್ಲ. ಈ ವ್ಯವಸ್ಥೆಗಳಲ್ಲಿ ಹಲವು ಮೌಲ್ಯಗಳು ಹಾಗೂ ಆಚರಣೆಗಳು ಶತಮಾನಗಳ ಕಾಲ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದರೆ ಮತ್ತು ಹಲವು ಮೌಲ್ಯಗಳು ಹಾಗೂ ಆಚರಣೆಗಳು ಕಾಲಪರಿಸ್ಥಿಗಳಿಗೆ ಅನುಗುಣವಾಗಿ ತಮ್ಮ ಔಚಿತ್ಯವನ್ನು ಕಳೆದುಕೊಳ್ಳುತ್ತದೆ. ಸ್ತ್ರೀತನ, ಪುರುಷತ್ವ, ಸ್ತ್ರೀ ಸಹಜ ದೌರ್ಬಲ್ಯಗಳು, ಪುರುಷನ ಬಲಗಳು ಇವೇ ಮೊದಲಾದ ಕಲ್ಪನೆಗಳು ಪ್ರತಿಯೊಂದು ಸಮಾಜಕ್ಕೂ ಸಾಂಸ್ಕೃತಿಕ ವ್ಯವಸ್ಥೆಯ ಕೊಡುಗೆ. ಈ ಕಾರಣದಿಂದಲೇ ಸಮಾಜದಲ್ಲಿ ಮಹಿಳೆಯರ ಮತ್ತು ಪುರುಷರ ಪಾತ್ರವಿಭಜನೆ ಉಂಟಾಗುವುದು ಮತ್ತು ಅವರಿಗೆ ಭಿನ್ನವಾದಂಥ ಸಾಮಾಜಿಕ –ಆರ್ಥಿಕ ಅವಕಾಶಗಳು ಲಭಿಸುವುದು. ಸ್ತ್ರೀ ಮನಸ್ಸು ಎಂದಾಕ್ಷಣ ಮೃದುತ್ವ, ಅಧೈರ್ಯ, ಅಸ್ಥಿರತೆ, ಅಸೂಯೆ ಹೀಗೆ ನಕಾರಾತ್ಮಕ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನೂ , ಅವರನ್ನು ಕುರಿತ ಸಾಮಾಜಿಕ ದೃಷ್ಟಿಕೋನಗಳನ್ನು ಪ್ರಭಾವಿಸುತ್ತದೆ· (ಡಾ|ಆರ್.ಇಂದಿರಾ)

ಒಂದು ದೇಶದ ಅಭಿವೃದ್ಧಿಯ ಮಾಪನದಲ್ಲಿ ಮಹಿಳೆಯರ ಪಾತ್ರವನ್ನು ಮತ್ತು ಸ್ಥಿತಿಗತಿಯನ್ನು ಒಂದು ಸೂಚಿಯಾಗಿ ನಿರ್ಧರಿಸಲಾಗುತ್ತದೆ. ಈ ನಿಟ್ಟಿನಲ್ಲಿ ಮಹಿಳೆಯರ ಪಾತ್ರವನ್ನು ವಿಶ್ಲೇಷಿಸುವುದು ಅತೀ ಮುಖ್ಯವಾಗಿದೆ. ಕಳೆದ ಮೂರು ದಶಕಗಳಲ್ಲಿ ಮಹಿಳೆಯರ ಸ್ಥಾನ ಮಾನದಲ್ಲಿ ಬದಲಾವಣೆಗಳಾಗಿದ್ದರೂ ನಿರೀಕ್ಷಿತ ಮಟ್ಟದಲ್ಲಿ ಮಹಿಳಾ ಸಶಕ್ತೀಕರಣದ ಕನಸು ನನಸಾಗದೇ ಉಳಿದಿರುವುದು ಸಮಕಾಲೀನ ಸಾಮಾಜಿಕ ಸತ್ಯಗಳಲ್ಲಿ ಒಂದು. ಇಂದು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಸಶಕ್ತೀಕರಣವೆಂಬುದು ಒಂದು ಭಾವಗರ್ಭಿತ

ಸಂಗತಿಯಾಗಿದೆ. ಇದಕ್ಕೆ ಸಂಬಂಧಿಸಿದ ಸಂಗತಿಗಳೆಂದರೆ ಮಹಿಳೆಯರ ಶಿಕ್ಷಣ, ಅವರ ಆಸ್ತಿಯ ಹಕ್ಕು, ಅವರ ಉದ್ಯೋಗದ ಅವಕಾಶಗಳು ಮತ್ತು ಕಾರ್ಮಿಕ ಮಾರುಕಟ್ಟೆಯ ಕಾರ್ಯವಿಧಾನ. ಈ ಎಲ್ಲಾ ಅಭಿಜಾತ ವಲಯಗಳ ಸಂಗತಿಗಳ ಆಚೆಗೆ ನೋಡಿದಾಗ ಕಂಡುಬರುವ ಸಂಗತಿಯೆಂದರೆ ಮಹಿಳೆಯರಿಗೆ ದೊರೆಯುವ ಉದ್ಯೋಗದ ಸ್ವರೂಪ, ಮಹಿಳೆಯರ ಆರ್ಥಿಕ ಚಟುವಟಿಕೆಗಳ ಬಗ್ಗೆ ಕುಟುಂಬ ತಳೆಯುವ ಮನೋಭಾವ ಮತ್ತು ಇಂತಹ ಬೆಳವಣಿಗೆಗೆ ಪೂರಕವಾದ ಅಥವಾ ಮಾರಕವಾದ ಸನ್ನಿವೇಶಗಳು.(ಡಾ.ಟಿ.ಆರ್.ಚಂದ್ರಶೇಖರ್)

ಎಲ್ಲಾ ಸಮಾಜಗಳಲ್ಲೂ ಲಿಂಗಾಧಾರಿತ ಶ್ರಮ ಹಾಗೂ ಪಾತ್ರ ವಿಭಜನೆಗಳ ಇತಿಹಾಸವನ್ನು ನಾವು ಕಾಣಬಹುದು. ಮಹಿಳೆಯರನ್ನು ಮೂಲಭೂತವಾಗಿ ಈ ಸಮಾಜ ನೋಡುವುದೇ ಎರಡು ಪ್ರಮುಖ ಪಾತ್ರಗಳಲ್ಲಿ. ಒಂದು ಹೆಂಡತಿಯಾಗಿ, ಮತ್ತೊಂದು ತಾಯಿಯಾಗಿ. ಸ್ತ್ರೀಯ ಜೈವಿಕ ರಚನೆಯ ಕಾರಣದಿಂದಾಗಿ ಆಕೆ ಮಕ್ಕಳನ್ನು ಹೊರುವ, ಹೆರುವ ಕೆಲಸಗಳನ್ನು ಮಾಡುತ್ತಾಳೆ. ಇದೇ ಕಾರಣವನ್ನು ಮುಂದಿಟ್ಟು, ಆಕೆಯನ್ನು ಸಕ್ರಿಯ ಸಾಮಾಜಿಕ ಜೀವನದಿಂದಲೇ ದೂರವಿಡುವ ಸಂಸ್ಕೃತಿ ನಿರ್ಮಿತ ಒಂದು ಪರಿಸ್ಥಿತಿ. ಅನೇಕ ಸಮುದಾಯಗಳಲ್ಲಿ ಸ್ತ್ರೀಯರು ದೈಹಿಕವಾಗಿ ಅತ್ಯಂತ ಕಷ್ಟಕರವಾದಂಥ ಕೆಲಸಗಳನ್ನು ನಿರ್ವಹಿಸುತ್ತಿದ್ದರೂ, ಅವರಿಗೆ 'ದುರ್ಬಲರು', 'ಶಕ್ತಿಹೀನರು', 'ಮೃದು' ಮುಂತಾದ ಪಟ್ಟಗಳನ್ನು ಕಟ್ಟಿ, ಅವರನ್ನು 'ಎರಡನೇ ದರ್ಜೆಯ ಪ್ರಜೆ'ಗಳಂತೆ ನಡೆಸಿಕೊಂಡು ಬರುತ್ತಿದೆ ಈ ಸಮಾಜ. ಲಿಂಗಾಧಾರಿತ ಸಾಮಾಜೀಕರಣ ವ್ಯವಸ್ಥೆಯನ್ನು ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳಲ್ಲೂ ಕಾಣಬಹುದು. ಸಮಾಜದ ಎಳೆ ಎಳೆಗಳಲ್ಲಿ ಹಾಸುಹೊಕ್ಕಾಗಿರುವ ಲಿಂಗಸಂಬಂಧಿ ಮೌಲ್ಯಗಳು ಹಾಗೂ ಆಚರಣೆಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವುದು ಸಂಸ್ಕೃತಿಯೇ ಆಗಿರುವುದರಿಂದ, ಮಹಿಳೆಯರ ಬದುಕನ್ನು ಆಯಾ ಸಮಾಜದ ಸಾಂಸ್ಕೃತಿಕ ಪರಿಸ್ಥಿತಿಗಳು ಬಹುಮಟ್ಟಿಗೆ ಪ್ರಭಾವಿಸುತ್ತವೆ. ಲಿಂಗ ತಾರತಮ್ಯ ಕಾಲ, ದೇಶ, ಜಾತಿ , ಜನಾಂಗಗಳ ಎಲ್ಲೆಯನ್ನು ಮೆಟ್ಟಿ ನಿಂತಂಥ ಪ್ರವೃತ್ತಿಯಾಗಿರುವುದರಿಂದ ಪ್ರತಿಯೊಂದು ಸಮಾಜದಲ್ಲೂ ಅದರ ಇರುವಿಕೆಯನ್ನು ನಾವು ಗಮನಿಸಬಹುದು.

ಜಾತಿ ಸ್ಥಾನಕ್ಕೂ ಲಿಂಗವ್ಯವಸ್ಥೆಯ ನಿರ್ಮಾಣಕ್ಕೂ ವಿಶೇಷವಾದ ಸಂಬಂಧವಿದೆ. ಜಾತಿ ಸಮಾಜದಲ್ಲಿ ಬಿರುಕುಗಳನ್ನು ತಂದಿದೆ ನಿಜ, ಆದರೆ ಈ ಬಿರುಕುಗಳು ಮಹಿಳೆಯರ ವಿಚಾರಕ್ಕೆ ಬಂದಾಗ ಮತ್ತಷ್ಟು ತೀವ್ರವಾಗುತ್ತದೆ. ಮಹಿಳೆಯರು ಒಗ್ಗಟ್ಟಾಗಿ ತಮ್ಮ ಅಭಿವೃದ್ಧಿ ಹಾಗೂ ಸಮಾನತೆಗಾಗಿ ಹೋರಾಡಲು ಜಾತಿ ವ್ಯವಸ್ಥೆ ಅನೇಕ ಸಂದರ್ಭಗಳಲ್ಲಿ ಅಡ್ಡಿ ಬಂದಿದೆ. ಮೇಲ್ಜಾತಿಗೆ ಸೇರಿದ ಅನೇಕ ಮಹಿಳೆಯರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತಮಗಿಂತ ಕೆಳಸ್ತರದಲ್ಲಿರುವ ಮಹಿಳೆಯರನ್ನು ತಮ್ಮ ಸಮಾನರಂತೆ ಪರಿಗಣಿಸುವುದಿಲ್ಲ. ಜಾತಿ ಒಂದು ಶ್ರೇಣೀಕೃತವಾದ ವ್ಯವಸ್ಥೆಯಾದ್ದರಿಂದ, ವಿವಿಧ ಜಾತಿಗಳಿಗೆ ಸೇರಿದ ಮಹಿಳೆಯರನ್ನು ಆ ಶ್ರೇಣಿಯಲ್ಲಿ ಕಂಡು ಬರುವ ವಿವಿಧ ಸ್ತರಗಳಲ್ಲಿ ವ್ಯವಸ್ಥೆ ಇರಿಸುತ್ತದೆ. ಜಾತಿ ಶ್ರೇಣಿಯಲ್ಲಿ ಕೆಳಸ್ತರಗಳಲ್ಲಿ ಇರಿಸಲಾಗಿರುವ ಜಾತಿಗಳ ಸದಸ್ಯರಾಗಿರುವ ಮಹಿಳೆಯರು ಒಂದು ರೀತಿಯಲ್ಲಿ ದ್ವಂದ್ವ ಅಸಮಾನತೆಯನ್ನು

ಎದುರಿಸುತ್ತಾರೆ. ಜಾತಿ ಆಧಾರಿತ ಅಸಮಾನತೆ, ಲಿಂಗ ಆಧಾರಿತ ಅಸಮಾನತೆಯನ್ನು ಪುಷ್ಠೀಕರಿಸುತ್ತದೆ. ಅನೇಕ ಮಹಿಳಾ ಹೋರಾಟಗಳೂ ಈ ಜಾತಿ ಭ್ರಮೆಗಳಿಂದ ದೂರವಾಗಿಲ್ಲದರ ಕಾರಣ, ಮಹಿಳಾ ಚಳುವಳಿಯ ಒಳಗೆ ಆಗಾಗ್ಗೆ ಬಿರುಕುಗಳು ಎದ್ದಿವೆ. ಮೇಲ್ಜಾತಿಗಳ ಮಹಿಳೆಯರು, ದಲಿತ, ಹಿಂದುಳಿದ ಹಾಗೂ ಗಿರಿಜನ ಮಹಿಳೆಯರ ಸಮಸ್ಯೆಗಳು ಹಾಗೂ ನೋವುಗಳನ್ನು ಸ್ವತಃ ಅನುಭವಿಸಿಲ್ಲವಾದ್ದರಿಂದ ಅವರಿಗೆ ಈ ನೋವುಗಳಿಗೆ ಸ್ಪಂದಿಸಲು ಸಾಧ್ಯವಿಲ್ಲವೆಂಬ ವಾದವೂ ಇದೆ. (ಡಾ।ಆರ್.ಇಂದಿರಾ)

ದಲಿತ, ಅಲ್ಪಸಂಖ್ಯಾತ ಮಹಿಳೆಯರು, ಉದ್ಯೋಗಸ್ಥರಾಗಿದ್ದರೂ, ಅವರ ಆರ್ಥಿಕ ಸ್ವಾವಲಂಬನೆ ಸಾಮಾಜಿಕ ಘನತೆಗೆ ನೆರವಾಗುತ್ತದೆ ಎಂದು ಹೇಳಲಾಗುವುದಿಲ್ಲ. ಸುಶಿಕ್ಷಿತ ಸಮಾಜದಲ್ಲಿ, ಸರ್ಕಾರಿ ಕಛೇರಿಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ಈ ದಮನಿತ ಮಹಿಳೆಯರನ್ನು ಅನ್ಯ ರನ್ನಾಗಿಯೇ ಕಾಣಲಾಗುತ್ತದೆ. ಹೊರನೋಟಕ್ಕೆ ಸಾಮಾಜಿಕ ಮತ್ತು ಸಂವಿಧಾನಿಕ ಅನಿವಾರ್ಯತೆಗಳಿಗೆ ಕಟ್ಟುಬಿದ್ದು, ಸಮಾನತೆಯ ಸೋಗಿನಲ್ಲಿದ್ದರೂ, ಮೇಲ್ಜಾತಿಯ ಸಮುದಾಯದ ಆಂತರ್ಯದಲ್ಲಿ ಸುಪ್ತವಾಗಿರುವ ತಾರತಮ್ಯ ಭಾವನೆ ಸೂಕ್ಷ್ಮ ಸಂದರ್ಭಗಳಲ್ಲಿ ಪ್ರಕಟಗೊಳ್ಳುತ್ತಿರುತ್ತದೆ. ಗ್ರಾಮೀಣ ಸಮುದಾಯಗಳಲ್ಲಿ ಈ ಸಮಸ್ಯೆ ಇನ್ನೂ ಗಂಭೀರವಾಗಿದ್ದು, ಜಾಗತೀಕರಣ ಮತ್ತು ಯಂತ್ರಾಧಾರಿತ ಆರ್ಥಿಕತೆಯ ಪರಿಣಾಮವಾಗಿ ಮಹಿಳೆಯರು ತಮ್ಮ ಸಾಮಾಜಿಕ ಸ್ಥಾನಗಳೊಂದಿಗೆ ಆರ್ಥಿಕ ಸ್ವಾವಲಂಬನೆಯನ್ನೂ ಕಳೆದುಕೊಳ್ಳುತ್ತಿದ್ದಾರೆ.(ಬಿ.ಯು.ಸುಮಾ)

**೧.೨ ಸಮಸ್ಯೀಕರಣ**

ಮುಂಡಾಲ ಸಮುದಾಯವು ಉಡುಪಿ ಜಿಲ್ಲೆಯಲ್ಲಿರುವಂತಹ ಪರಿಶಿಷ್ಟ ಜಾತಿ ಸಮುದಾಯವಾಗಿದೆ. ಪ್ರಸ್ತುತ ಜಿಲ್ಲೆಯಲ್ಲಿ ಈ ಸಮುದಾಯವು ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದಿದೆ. ಈ ಸಮುದಾಯವು ರಾಜ್ಯದ ಇತರ ಪರಿಶಿಷ್ಟ ಜಾತಿ ಸಮುದಾಯಗಳಂತೆಯೇ ಜಾತಿ ಅಸಮಾನತೆ, ಶೈಕ್ಷಣಿಕ ಹಿನ್ನಡೆ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದೆ. ಸಮುದಾಯದ ಮಹಿಳೆಯರು ಜಾತಿ ಆಧಾರಿತ ಹಾಗೂ ಲಿಂಗಾಧಾರಿತ ಅಸಮಾನತೆಗಳನ್ನು ಅನುಭವಿಸುತ್ತಿದ್ದಾರೆ. ಈ ಸಮುದಾಯದ ಸ್ಥಿತಿಗತಿಗಳ ಬಗ್ಗೆಯಾಗಲೀ ಹಾಗೂ ಮಹಿಳೆಯರ ಬಗ್ಗೆಯಾಗಲೀ ಯಾವುದೇ ಅಧ್ಯಯನಗಳು ನಡೆದ ದಾಖಲೆಗಳಿಲ್ಲ. ಮುಂಡಾಲ ಸಮುದಾಯವು ಮಲೆನಾಡು ಜಿಲ್ಲೆಗಳಾದ ಶಿವಮೊಗ್ಗ, ಚಿಕ್ಕಮಗಳೂರಿನಿಂದ ಆರ್ಥಿಕ ಮೂಲವನ್ನರಸಿ ವಲಸೆ ಹೊಂದಿದ ಸಮುದಾಯವೆನ್ನಲಾಗುತ್ತದೆ. ಇವರ ಮನೆಗಳು ಸರಕಾರ ಉಚಿತವಾಗಿ ನೀಡಿರುವ ನಿವೇಶನದಲ್ಲಿರುವುದರಿಂದ ವಲಸೆಗರೆನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆರ್ಥಿಕವಾಗಿ ಈ ಸಮುದಾಯವು ಜಿಲ್ಲೆಯಾದ್ಯಂತ ಅತ್ಯಂತ ಕೆಳಸ್ತರದಲ್ಲಿಯೇ ಇರುವುದು ಗೋಚರಿಸುತ್ತದೆ. ಇತ್ತೀಚೆಗಷ್ಟೇ ಸರಕಾರದ ಮೀಸಲಾತಿ ಹಾಗೂ ಇತರ ಸವಲತ್ತುಗಳನ್ನು ಬಳಸಿಕೊಂಡು ಕೆಲವು ಕುಟುಂಬಗಳು ಶೈಕ್ಷಣಿಕ ಹಾಗೂ ಆರ್ಥಿಕ ಪ್ರಗತಿಯಲ್ಲಿದೆ.

ಮುಂಡಾಲ ಸಮುದಾಯದ ಮಹಿಳೆಯರು ಜಿಲ್ಲೆಯ ಇತರ ಪರಿಶಿಷ್ಟ ಜಾತಿ ಮಹಿಳೆಯರ ಸ್ಥಿತಿಯಲ್ಲಿಯೇ ಜೀವಿಸುತ್ತಿದ್ದಾರೆ. ಪುರುಷರಿಗೆ ದೊರೆತಷ್ಟು ಶೈಕ್ಷಣಿಕ ಅವಕಾಶಗಳು ಸಮುದಾಯದಲ್ಲಿ ಮಹಿಳೆಯರಿಗೆ ಲಭಿಸುತ್ತಿಲ್ಲ. ಆರ್ಥಿಕ ಸಮಸ್ಯೆಯು ಇವರ ಶೈಕ್ಷಣಿಕ ಹಿನ್ನಡೆಗೆ ಇನ್ನೊಂದು ಕಾರಣವಾಗಿದೆ. ರಾಜಕೀಯವಾಗಿಯೂ ಮಹಿಳೆಯರ ಪಾಲುದಾರಿಕೆ ಶೂನ್ಯವೇ ಎನ್ನಬಹುದು. ಉಡುಪಿ ಜಿಲ್ಲೆಯು ರಾಜ್ಯದಲ್ಲಿ ಶೈಕ್ಷಣಿಕವಾಗಿ ಮೊದಲ ಸ್ಥಾನದಲ್ಲಿದ್ದರೂ, ಗ್ರಾಮೀಣ ಪ್ರದೇಶದಲ್ಲಿ ಅಸ್ಪೃಶ್ಯತೆಯ ವಿವಿಧ ಮಜಲುಗಳನ್ನು ಕಾಣಬಹುದಾಗಿದೆ. ಆದ್ದರಿಂದ ಆರ್ಥಿಕ ಸಾಮಾಜಿಕ ಸಮಸ್ಯೆಗಳನ್ನು ಗುರುತಿಸಿ ಇದು ಅಧ್ಯಯನಕ್ಕೆ ಯೋಗ್ಯವೆಂದು ಪರಿಗಣಿಸಲಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ಮುಂಡಾಲ ಸಮುದಾಯದ ಮಹಿಳೆಯರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**೧.೩ ಸಾಹಿತ್ಯ ವಿಮರ್ಶೆ**

ಮುಂಡಾಲ ಸಮುದಾಯದ ಬಗ್ಗೆ ಹಾಗೂ ಪರಿಶಿಷ್ಟ ಜಾತಿ ಸಮುದಾಯದ ಮಹಿಳೆಯರ ಬಗ್ಗೆ ಈಗಾಗಲೇ ನಡೆಸಿದ ಸಾಹಿತ್ಯ ವಿಮರ್ಶೆ ಈ ಕೆಳಗಿನಂತಿದೆ.

ವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿಗಳ ಬಗ್ಗೆ ಈಗಾಗಲೇ ಹಲವಾರು ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಲೇ ಇವೆ. ಆದರೆ ವಿಭಜಿತ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿರುವ ಮುಂಡಾಲ ಸಮುದಾಯದ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದ ಬಗ್ಗೆ ಯಾವುದೇ ಮಾಹಿತಿಗಳು ಲಭ್ಯವಾಗಿಲ್ಲ. ಪಿ.ಕಮಲಾಕ್ಷರವರು ಬರೆದ 'ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ', ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪, ಈ ಪುಸ್ತಕದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಲ್ಲಿನ ಸುಮಾರು ೧೮ ಪರಿಶಿಷ್ಟ ಜಾತಿಗಳೂ ಹಾಗೂ ಮೂರು ಪರಿಶಿಷ್ಟ ಪಂಗಡಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹಾಗೂ ತದನಂತರ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಸ್ಥಿತಿಗತಿ ಯಾವರೀತಿಯಲ್ಲಿ ಇತ್ತು ಎಂದು ತಿಳಿಸಲಾಗಿದೆ. ಅದರೊಂದಿಗೆ ಪರಿಶಿಷ್ಟ ಜಾತಿಯಾದ ಮುಂಡಾಲ ಸಮುದಾಯದ ಬಗ್ಗೆ ವಿವರಿಸುತ್ತಾ ಪೂರ್ವದಲ್ಲಿ ಮುಂಡಾಲರು ಜೈನ ಅರಸರ ಹಾಗೂ ಬಲ್ಲಾಳರ ಸೇವಕರಾಗಿದ್ದರು ಹಾಗೂ ಮುಂಡಾಲರ ಆಚಾರ ವಿಚಾರಗಳ ಬಗ್ಗೆ ವಿವರಿಸುತ್ತಾ ಚಾರಿತ್ರಿಕ ವಿಶ್ಲೇಷಣೆಯ ಬಗ್ಗೆ ಬೆಳಕು ಚೆಲ್ಲಲಾಗಿದೆ. ಆದರೆ ಈ ಪುಸ್ತಕದಲ್ಲಿ ಮುಂಡಾಲ ಮಹಿಳೆಯರ ಆಗಿನ ಸ್ಥಿತಿಗತಿಗಳ ಬಗ್ಗೆ ಹೆಚ್ಚಿನ ಮಾಹಿತಿಗಳು ಕಂಡು ಬರುವುದಿಲ್ಲ.

ಮಂಜೇಶ್ವರ ಗಣಪತಿ ರಾವ್ ಐಗಳ್ ಇವರು ಬರೆದಿರುವ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಎಂಬ ಪುಸ್ತಕದಲ್ಲಿರುವ , ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವಸ್ಥಿತಿ ಎರಡನೇ ಅಧ್ಯಾಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮುಂಡಾಲ ಸಮುದಾಯದ ಬಗ್ಗೆ ಈ ರೀತಿ ಉಲ್ಲೇಖಿಸಿದ್ದಾರೆ. 'ಮುಂಡಾಲ, ಬಾಕುಡ, ಮೇರ ಈ ಮೂರು

ವಂಶದವರು ಕೊರಗರ ವಂಶಗಳಿಗಿಂತಲೂ ಸ್ವಲ್ಪ ನಾಗರೀಕತೆಯಲ್ಲಿ ಮುಂದಕ್ಕೆ ಬಂದಿರುತ್ತಾರೆ. ಮುಂಡಾಲ ಮತ್ತು ಬಾಕುಡ ಇವರು ತುಳು ಜೈನ ಅರಸರ ಸೈನ್ಯದಲ್ಲಿ ಸೇನಾಧಿಪತಿಗಳೂ ಹಾಗೂ ಸೈನಿಕರಾಗಿದ್ದರು. ಮಯೂರವರ್ಮನ ಸಂಗಡ ಯುದ್ಧ ಮಾಡಿದವರು ಮುಂಡಾಲರು. ಮೂಲಿಕೆ, ಪಡುಬಿದರೆ, ಎರ್ಮಾಳು, ಕಾಪು, ಕಟಪಾಡಿ ಮುಂತಾದ ಜೈನ ಅರಸರ ಸೈನ್ಯದಲ್ಲಿ ಬಾಕುಡ ಸೇನಾಧಿಪತಿಗಳ ಕೈಕೆಳಗೆ ಮುಂಡಾಲ ಸೈನ್ಯವೂ ಇತ್ತೆಂದು ತಿಳಿದು ಬಂದಿದೆ'. ಈ ಪುಸ್ತಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸದೊಂದಿಗೆ ಮುಂಡಾಲ ಸಮುದಾಯದ ಪುರುಷರು ಅರಸರ ಸೈನ್ಯಗಳಲ್ಲಿ ಸೇನಾಧಿಪತಿಗಳಾಗಿದ್ದರು ಎಂಬುದನ್ನೂ ಮಾತ್ರ ಉಲ್ಲೇಖಿಸಲಾಗಿದೆ. ಆದರೆ ಪೂರ್ವದಲ್ಲಿ ಮುಂಡಾಲ ಸಮುದಾಯದವರ ಕುಲಕಸಬುಗಳ ಬಗ್ಗೆಯಾಗಲೀ, ಇವರ ಸಾಮಾಜಿಕ ಜೀವನ ಶೈಲಿಯ ಬಗ್ಗೆ ಹಾಗೂ ಆಗಿನ ಕಾಲದ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ವಿವರಣೆಗಳು ಲಭ್ಯವಾಗಿಲ್ಲ.

Gazettiar of India- 1973 ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯ ಮಾಹಿತಿ ಪುಸ್ತಕ ಹಾಗೂ ಶೆಡ್ಯೂಲ್ಡ್ ಕಾಸ್ಟ್ ಎಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಮೈಸೂರ್ ಸ್ಟೇಟ್ ಎಂಬ ಪುಸ್ತಕದಲ್ಲಿ ಕೇವಲ ಮುಂಡಾಲ ಎಂಬ ಹೆಸರಿನ ಉಲ್ಲೇಖವಿದ್ದು ಈ ಸಮುದಾಯದ ಬಗ್ಗೆ ಯಾವುದೇ ವಿವರಣೆಗಳಿಲ್ಲ.

ಸುನಿತಾ ಆರ್ಯ 'ದಲಿತ್ ಆಂಡ್ ಬ್ಯಾಕ್‌ವರ್ಡ್ ವಿಮೆನ್' ಎಡುಕೇಶನಲ್ ಪಬ್ಲಿಕೇಶರ್ಸ್ ಆಂಡ್ ಡಿಸ್ಟಿಬ್ಯೂಟರ್ಸ್, ನ್ಯೂ ದೆಹಲಿ ೨೦೧೦

ಈ ಪುಸ್ತಕದಲ್ಲಿ ಸುನಿತಾ ಆರ್ಯರವರು ಭಾರತದಲ್ಲಿ ದಲಿತ ಮತ್ತು ಹಿಂದುಳಿದ ವರ್ಗದ ಮಹಿಳೆಯರ ಸ್ಥಿತಿಗತಿಯ ಬಗ್ಗೆ ವಿಮರ್ಶಿಸಿದ್ದಾರೆ. ಅಸ್ಪರ್ಶತೆ ಹುಟ್ಟಿಕೊಂಡ ಬಗೆ ಅದರಲ್ಲೂ ವೇದಗಳು ಹಾಗೂ ಹಿಂದೂ ಧರ್ಮದ ಗ್ರಂಥಗಳು ಜಾತಿ ಆಧಾರಿತ ಮತ್ತು ಲಿಂಗ ಆಧಾರಿತ ಅಸಮಾನತೆಯನ್ನು ಹೇಗೆ ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸಿದ್ದಾರೆ. ಮನುಸ್ಮೃತಿಯ ಪ್ರಕಾರ ಮಹಿಳೆಯರಿಗೆ ಶಿಕ್ಷಣ, ಸ್ವಾತಂತ್ರ್ಯ ಮತ್ತು ಆಸ್ತಿಯ ಹಕ್ಕುಗಳಿಲ್ಲ. ಅದೇ ರೀತಿಯಲ್ಲಿ ಮಹಿಳಾ ದೌರ್ಜನ್ಯವನ್ನು ಇದು ಪುಷ್ಟೀಕರಿಸುತ್ತದೆ. ಸುನಿತಾ ಆರ್ಯರವರು ದಲಿತ ಮಹಿಳೆಯರ ಸಮಸ್ಯೆಗಳು, ದಲಿತ ಮಹಿಳೆಯರಿಗಾಗಿ ಸರಕಾರದ ಯೋಜನೆಗಳು ಹಾಗೂ ದಲಿತ ಚಳುವಳಿಗಳ ಬಗ್ಗೆ ತಮ್ಮ ಅಧ್ಯಯನದಲ್ಲಿ ವಿವರಿಸಿದ್ದಾರೆ.

ಜೋನಾಥನ್ ಪಿ ರವರ ಲೇಖನ 'ಸೋಶಿಯಲ್ ಪ್ರೊಟೆಕ್ಷನ್ ಆಂಡ್ ಸೋಶಿಯಲ್ ರಿಲೇಶನ್ಸ್ : ಎವಿಡೆನ್ಸ್ ಫ್ರೊಮ್ ಶೆಡ್ಯೂಲ್ಡ್ ಕಾಸ್ಟ್ ವಿಮೆನ್ ಅಸೋಶಿಯೇಶನ್ ಇನ್ ರೂರಲ್ ಸೌತ್ ಇಂಡಿಯಾ'2011

ಈ ಲೇಖನದ ಪ್ರಕಾರ ಆರ್ಥಿಕ ಸ್ಥಿರತೆಯಿದ್ದಾಗ ಮಾತ್ರ ದಲಿತ ಮಹಿಳೆಯರು ಸಾಮಾಜಿಕ ಭದ್ರತೆಗಳ ಬಗ್ಗೆ ದನಿಯೆತ್ತಬಹುದು. ಈ ಸಾಮಾಜಿಕ ಭದ್ರತೆ ಯನ್ನು ಪಡೆಯಬೇಕಾದರೆ ದಲಿತ ಮಹಿಳಾ ಸಂಘಟನೆಗಳ ಪಾತ್ರ ಅತೀ ಮುಖ್ಯವಾಗಿರುತ್ತದೆ. ಈ ಬದಲಾವಣೆಗಳು ದಲಿತ ಮಹಿಳೆಯರ ಆರ್ಥಿಕ, ಸಾಮಾಜಿಕ ಮತ್ತು

ರಾಜಕೀಯ ವಲಯದಲ್ಲೂ ಪ್ರಭಾವ ಬೀರುವಂತಿರಬೇಕು. ಅಂತಹ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಈ ಮುಂದೆ ತಿಳಿಸಲಿರುವ ಅಂಶಗಳ ಬಗ್ಗೆ ಗಮನ ಹರಿಸುವುದು ಮುಖ್ಯವೆನಿಸುತ್ತದೆ; ಇತರ ಶ್ರೇಣಿಯ ಜಾತಿಗಳ ಆರ್ಥಿಕ ಸುಸ್ಥಿರತೆಯ ಮಟ್ಟವನ್ನು ಅಧ್ಯಯನ ಮಾಡುವುದು, ಸಾಮಾಜಿಕ ಚಳುವಳಿದಾರರ ಬೆಂಬಲವನ್ನು ಪಡೆದುಕೊಳ್ಳುವುದು ಹಾಗೂ ದಲಿತ ಮಹಿಳಾಪರ ಆಡಳಿತಾತ್ಮಕವಾದ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.

ಡಾನ ದನ್; ಜಂಡರ್ ಇನ್ ಇಕ್ವ್ಯಾಲಿಟಿ ಇನ್ ಎಡುಕೇಶನ್ ಆಂಡ್ ಎಂಪ್ಲಾಯ್ ಮೆಂಟ್ ಇನ್ ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಇಂಡಿಯಾ; ಪಾಪಲೇಶನ್ ರಿಸರ್ಚ್ ಆಂಡ್ ಪಾಲಿಸಿ ರಿವಿವ್; ೧೯೯೩

ಭಾರತದಲ್ಲಿರುವ ಜಟಿಲ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯು ಲಿಂಗಾಧಾರಿತ ಮತ್ತು ಜಾತಿ ಆಧಾರಿತ ಅಸಮಾನತೆಯನ್ನು ಹುಟ್ಟು ಹಾಕಿದೆ. ದುರ್ಬಲ ವರ್ಗದ ಮಹಿಳೆಯರ ಅಬಿವೃದ್ಧಿಗಾಗಿ ಸರಕಾರವು ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸಿದರೂ ಪರಿಶಿಷ್ಟ ಜಾತಿಯ ಮತ್ತು ಪ.ಪಂಗಡದ ಮಹಿಳೆಯರು ಈ ಎಲ್ಲಾ ಯೋಜನೆಗಳಿಂದ ವಂಚಿತರಾಗುತ್ತಿದ್ದಾರೆ. ಸಮಾಜದ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಯಾವುದೇ ಸ್ಥಾನಮಾನಗಳು ಇಲ್ಲದೇ ಇರುವುದು ಹಾಗೂ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಪ.ಜಾ ಮತ್ತು ಪ. ಪಂಗಡಗಳು ಅತ್ಯಂತ ಕೆಳ ಸ್ಥರಗಳಲ್ಲಿರುದರಿಂದ, ಈ ಸಮುದಾಯಗಳ ಮಹಿಳೆಯರು ಶಿಕ್ಷಣ ಮತ್ತು ಉದ್ಯೋಗವನ್ನು ಪಡೆಯುವಲ್ಲಿ ವಂಚಿತರಾಗುತ್ತಿದ್ದಾರೆ.

ಕರುಣಾ ಚನ್ನಾ; ಅಸೆಸಿಂಗ್ ಹೈಯರ್ ಎಡುಕೇಶನ್; ದಿ ದೈಲಮಾ ಆಪ್ ಸ್ಕೂಲಿಂಗ್ ವಿಮೆನ್, ಮೈನೋರಿಟೀಸ್, ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಕನ್‌ಟೆಂಪರರೀ ಇಂಡಿಯಾ; ವಾಲ್ಯೂಮ್ ೨೬;೧೯೯೩

ಈ ಲೇಖನದಲ್ಲಿ ಕರುಣಾರವರು ಉನ್ನತ ಶಿಕ್ಷಣ ನೀತಿಯ ಬಗ್ಗೆ ವಿಶ್ಲೇಷಣೆಯನ್ನು ನೀಡಿದ್ದಾರೆ. ಸಮಾಜದಲ್ಲಿ ದುರ್ಬಲ ವರ್ಗದವರೆನಿಕೊಂಡ ಮಹಿಳೆಯರು, ಪ.ಜಾ ಮತ್ತು ಪ.ಪಂಗಡ ಹಾಗೂ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಸರಕಾರವು ಮೀಸಲಾತಿ ಮತ್ತು ಅನೇಕ ಪ್ರಾಯೋಜಿತ ಕಾರ್ಯಕ್ರಮಗಳನ್ನು ರೂಪಿಸಿದೆ. ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಸಮಾಜದಲ್ಲಿ ಪ.ಜಾ ಮತ್ತು ಪ.ಪಂಗಡಗಳು ಸಮಾನ ಅವಕಾಶಗಳನ್ನು ಪಡೆದುಕೊಳ್ಳುವುದು, ಅಲ್ಪಸಂಖ್ಯಾತರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ಹಾಗೂ ಮಹಿಳೆಯರ ಸಮಾನತೆ. ಆದರೆ ಪ್ರಸ್ತುತ ಶಿಕ್ಷಣ ನೀತಿಯು ಮೇಲ್ಕಂಡ ಉದ್ದೇಶಗಳನ್ನು ಸಾಧಿಸುವಲ್ಲಿ ವಿಫಲವಾಗಿದೆ, ಕಾರಣ ಎಲ್ಲಾ ಶಿಕ್ಷಣ ನೀತಿಗಳು ಕೇಂದ್ರೀಕೃತ ಉದ್ದೇಶ ಹೊಂದಿದ್ದು, ಸಮಾಜದ ವಿವಿಧ ವಲಯಗಳನ್ನು ತಲುಪಲು ಸಾಧ್ಯವಾಗಿಲ್ಲ. ಕೊನೆಯದಾಗಿ ಉನ್ನತ ಶಿಕ್ಷಣ ನೀತಿಗಳು ಸಮಾಜದ ನೈಜ

ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸದೆ ಯೋಜನೆಗಳು ಮತ್ತು ಅವುಗಳ ಅನುಷ್ಠಾನಗಳಲ್ಲಿ ಅಂತರವಿದೆ ಎನ್ನುದನ್ನು ಸೂಚಿಸುತ್ತದೆ.

ಕಾರಡೆ, ಜಗನ್; ಅಕ್ಯುಪೇಶನ್ ಮೊಬಿಲಿಟಿ ಆಮ್ಯೋಂಗ್ ಶೆಡ್ಯೂಲ್ಡ್ ಕಾಸ್ಟ ಇನ್ ಇಂಡಿಯಾ; ಕೇಮ್‌ಬ್ರಿಡ್ಜ ಸ್ಕೋಲರ್ಸ್ ಪಬ್ಲಿಶಿಂಗ್ ಯು.ಕೆ ೨೦೦೯

ಈ ಲೇಖನದಲ್ಲಿ ಪರಿಶಿಷ್ಟ ಜಾತಿಯ ವೃತ್ತಿ ಬದಲಾವಣೆಗಳಿಗೆ ಕಾರಣಗಳೂ ಹಾಗೂ ಅದರ ಸ್ವರೂಪದ ಬಗ್ಗೆ ವಿವರಿಸಲಾಗಿದೆ. ಪರಿಶಿಷ್ಟ ಜಾತಿಯ ಜನರ ವೃತ್ತಿ ಪಲ್ಲಟಗಳಲ್ಲಿ ಎರಡು ವಿಧದ ಅಂಶಗಳನ್ನು ಗಮನಿಸಬಹುದು ಒಂದು ಆತಂರಿಕ ತಲೆಮಾರಿನ ಹಾಗೂ ಆತಂರಿಕವಲ್ಲದ ತಲೆಮಾರಿನ ವೃತ್ತಿ ಪಲ್ಲಟನೆಗಳು. ಸ್ವಾತಂತ್ರ್ಯದ ನಂತರ ಪರಿಶಿಷ್ಟ ಜಾತಿಯ ಜನರ ಅಭಿವೃದ್ಧಿಗಾಗಿ ಸರಕಾರವು ಮೀಸಲಾತಿಯ ನೀತಿಯನ್ನು ಹಾಗೂ ಅಸ್ಪ್ರಶ್ಯತಾ ನಿವಾರಣಾ ಕಾನೂನುಗಳನ್ನು ಅನುಷ್ಠಾನಗೊಳಿಸಿತು. ಈ ಕಾರಣದಿಂದಾಗಿ ಅನೇಕ ಪರಿಶಿಷ್ಟ ಜಾತಿಗಳು ತಮ್ಮ ಮೂಲ ಕಸುಬನ್ನು ತೊರೆದು, ಶಿಕ್ಷಣವನ್ನು ಪಡೆದು ವಿವಿಧ ಉದ್ಯೋಗಗಳಿಗೆ ಸೇರ್ಪಡೆಗೊಂಡರು. ಈ ಬದಲಾವಣೆಗಳು ಅವರಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ತಂದು ಕೊಟ್ಟರೂ ಸಾಮಾಜಿಕ ಸ್ಥಾನಮಾನದಲ್ಲಿ ಯಾವುದೇ ತರಹದ ಬದಲಾವಣೆಯನ್ನು ತರಲಿಲ್ಲ ಹಾಗೂ ಮೇಲ್ವರ್ಗದವರ ಅಸಮಾನತೆಯಿಂದ ಹೊರಬರಲು ಸಾಧ್ಯವಾಗಲಿಲ್ಲ ಎಂಬುದನ್ನು ಈ ಲೇಖನದ ಸಾರಾಂಶ.

ಪರಿಶಿಷ್ಟ ಮಹಿಳೆಯರ ಬಗ್ಗೆ ಹಲವಾರು ಅಧ್ಯಯನಗಳು ಈಗಾಗಲೇ ನಡೆದಿದೆ. ಬಹುತೇಕ ಅಧ್ಯಯನಗಳು ಮಹಿಳೆಯರ ಸಾಮಾಜಿಕ ಸ್ಥಾನಮಾನ, ಸಾಮಾಜಿಕ ಬದಲಾವಣೆ ಹಾಗೂ ಸಮಸ್ಯೆಗಳ ಬಗ್ಗೆ ಗಮನ ಹರಿಸಿದೆ. ಆದರೆ ಪ್ರಸ್ತುತ ಮುಂಡಾಲ ಸಮುದಾಯದ ಮಹಿಳೆಯರ ಸ್ಥಾನಮಾನದ ಬಗ್ಗೆ ಯಾವುದೇ ಅಧ್ಯಯನಗಳು ನಡೆದಿಲ್ಲ. ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಮುಂಡಾಲ ಸಮುದಾಯದ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳೇನು? ಶಿಕ್ಷಣ ಮತ್ತು ಆರ್ಥಿಕ ಸುಸ್ಥಿರತೆಯು ಮುಂಡಾಲ ಮಹಿಳೆಯರಲ್ಲಿ ಎಷ್ಟರಮಟ್ಟಿಗೆ ಬದಲಾವಣೆಯನ್ನು ತರುವಲ್ಲಿ ಯಶಸ್ವಿಯಾಯಿತು? ಇತರ ದಲಿತ ಮಹಿಳೆಯರಿಗಿಂತ ಮುಂಡಾಲ ಮಹಿಳೆಯರ ಪರಿಸ್ಥಿತಿ ಹಾಗೂ ಸಮಸ್ಯೆಗಳಲ್ಲಿ ಏನಾದರೂ ಅಂತರವಿದೆಯೇ? ಮಹಿಳಾ ಮೀಸಲಾತಿ ಹಾಗೂ ಇತರ ಸರಕಾರಿ ಸವಲತ್ತುಗಳ ನೆಲೆಯಲ್ಲಿ ಇವರ ಭಾಗವಹಿಸುವಿಕೆ ಸಮುದಾಯಿಕ ಬದಲಾವಣೆಯನ್ನು ತರಲು ಸಹಕಾರಿಯಾಗಿದೆಯೇ?

ಹೀಗೆ ಮುಂಡಾಲ ಮಹಿಳೆಯರ ಕುರಿತಾಗಿ ಹುಟ್ಟುವ ಅನೇಕ ಸಾಮಾಜಿಕ ಹಾಗೂ ಆರ್ಥಿಕ ಪರಿಕಲ್ಪನೆಯ ನಾನಾ ಪ್ರಶ್ನೆಗಳನ್ನು ಉತ್ತರಿಸಲು ನಡೆಸುವ ಯತ್ನವೇ ಈ ಅಧ್ಯಯನ.

**೧.೪ ಅಧ್ಯಯನದ ಉದ್ದೇಶಗಳು:**

೧. ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯನ್ನು ತಿಳಿಯುವುದು

೨. ಮುಂಡಾಲ ಮಹಿಳೆಯರ ಶೈಕ್ಷಣಿಕ ಮತ್ತು ಔದ್ಯೋಗಿಕ ಹಿನ್ನಲೆಯ ವಿಶ್ಲೇಷಣೆ

೩. ಮುಂಡಾಲ ಮಹಿಳೆಯರಿಗೆ ಲಭ್ಯವಾಗಿರುವ ಸರಕಾರಿ ಸವಲತ್ತುಗಳು ಮತ್ತು ಅವುಗಳ ಫಲಾನುಭವದ ಕುರಿತು ತಿಳಿದುಕೊಳ್ಳುವುದು.

೪. ಮುಂಡಾಲ ಮಹಿಳೆಯರ ಸಾಮಾಜಿಕ ಬದಲಾವಣೆ ಹಾಗೂ ಮಹಿಳಾ ಸಬಲೀಕರಣದ ಬಗ್ಗೆ ಅಧ್ಯಯನವನ್ನು ನಡೆಸುವುದು.

**೧.೫ ಅಧ್ಯಯನದ ಊಹೆಗಳು:**

೧. ಮುಂಡಾಲ ಸಮುದಾಯದ ಮಹಿಳೆಯರ ಸಾಮಾಜಿಕ ಸ್ಥಿತಿಗತಿಯಲ್ಲಿ ಸುಧಾರಣೆಯಾಗಬೇಕಾಗಿದೆ.

೨. ಮುಂಡಾಲ ಸಮುದಾಯದ ಮಹಿಳೆಯರು ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿಯೂ ಹಿಂದುಳಿದಿದ್ದಾರೆ.

**ಅಧ್ಯಯನದ ವ್ಯಾಪ್ತಿ:**

ಈ ಅಧ್ಯಯನವು ಉಡುಪಿ ತಾಲೂಕಿನ ಮುಂಡಾಲ ಸಮುದಾಯದ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತ್ಯಂತರಗಳನ್ನು ಒಳಗೊಳ್ಳುವುದು. ನಗರ ಪ್ರದೇಶಗಳಲ್ಲಿ ಹಾಗೂ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮಹಿಳೆಯರ ಸ್ಥಿತಿಗತಿಯ ಬಗ್ಗೆ ಗಮನ ಹರಿಸಲಾಗುವುದು. ಸಮುದಾಯದ ಕುರಿತ ಮುಂದಿನ ಅಧ್ಯಯನಕ್ಕೆ ಈ ಅಧ್ಯಯನವು ಅವಕಾಶಗಳನ್ನು ಹುಟ್ಟುಹಾಕುವುದು.

**೧.೬ ಅಧ್ಯಯನದ ವಿಧಾನ:**

ಮುಂಡಾಲ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಮಾಹಿತಿಯನ್ನು ವಿವಿಧ ಮೂಲಗಳಿಂದ ಮತ್ತು ವಿವಿಧ ವಿಧಾನಗಳಿಂದ ಪಡೆಯಲಾಗಿದೆ. ಮುಂಡಾಲ ಮಹಿಳೆಯರ ಒಟ್ಟು ಸಂಖ್ಯೆ ಹಾಗೂ ಶೈಕ್ಷಣಿಕ ದಾಖಲಾತಿಗೆ ಸಂಬಂಧಪಟ್ಟ ಮಾಹಿತಿಯನ್ನು ಅನುಷಂಗಿಕ ಮೂಲಗಳಿಂದ ಪಡೆಯಲಾಗಿದ್ದು, ಮಹಿಳೆಯರ ಪಾತ್ರ, ಆರ್ಥಿಕ ಸ್ಥಿತಿಗತಿ ಹಾಗೂ ಸಮಸ್ಯೆಗಳ ಮಾಹಿತಿಯನ್ನು ಪ್ರಾಥಮಿಕ ಮೂಲಗಳಾದ ಅವಲೋಕನ, ಪ್ರಶ್ನಾವಳಿ ಮೂಲಕ ಸಂದರ್ಶನ ಮಾಡಿ ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ವಿವರಣಾತ್ಮಕ ವಿಧಾನದಿಂದ ವಿಷ್ಲೇಶಿಸಲಾಗಿದೆ.

## ೧.೭ ಅಧ್ಯಾಯಗಳು:

* ಮೊದಲನೆಯ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು, ವಿಷಯಕ್ಕೆ ಸಂಬಂಧಿಸಿದಂತೆ ಸಂಕ್ಷಿಪ್ತ ಸಾಹಿತ್ಯ ವಿಮರ್ಶೆ, ಅಧ್ಯಯನ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಊಹೆ, ಅಧ್ಯಯನದ ವಿಧಾನ ಇತ್ಯಾದಿಗಳನ್ನು ಹೇಳಲಾಗುವುದು.

* ಎರಡನೇ ಅಧ್ಯಾಯದಲ್ಲಿ ಕರ್ನಾಟದಲ್ಲಿನ ಪರಿಶಿಷ್ಟ ಜಾತಿ ಸಮುದಾಯಗಳ ಅಂಕಿ ಅಂಶಗಳ ವಿಶ್ಲೇಷಣೆ, ದಲಿತ ಮಹಿಳೆಯ ಸ್ಥಿತಿಗತಿಯ ವಿವರಣೆ, ದಲಿತ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳು ಹಾಗೂ ಅಸ್ಪೃಶತಾ ನಿವಾರಣಾ ಕಾನೂನಿನ ಬಗ್ಗೆ ತಿಳಿದುಕೊಳ್ಳಲಾಗುವುದು.

* ಮೂರನೆಯ ಅಧ್ಯಾಯದಲ್ಲಿ ಕ್ಷೇತ್ರಾಧಾರಿತ ಅಂಕಿಅಂಶಗಳ ವಿಶ್ಲೇಷಣೆಯ ಅಧ್ಯಾಯವಾಗಿರುವುದರಿಂದ ಮೊದಲಿಗೆ ಉಡುಪಿ ಜಿಲ್ಲೆಯ ಪರಿಚಯ, ಮುಂಡಾಲ ಸಮುದಾಯದ ಪರಿಚಯ ಮತ್ತು ಮುಂಡಾಲ ಸಮುದಾಯದ ಜನಗಣತಿ ವರದಿಯ ಬಗ್ಗೆ ವಿವರಿಸಲಾಗಿದೆ.

* ನಾಲ್ಕನೆಯ ಅಧ್ಯಾಯದಲ್ಲಿ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಹಾಗೂ ಮಹಿಳಾ ಸಬಲೀಕರಣಕ್ಕೆ ಪೂರಕವಾಗಿರುವಂತಹ ವಿಷಯಗಳು ಬಗ್ಗೆ ಕ್ಷೇತ್ರಕಾರ್ಯಾಧಾರಿತ ಮಾಹಿತಿಯ ವಿಶ್ಲೇಷಣೆ ಮಾಡಲಾಗಿದೆ.

* ಐದನೇ ಅಧ್ಯಾಯವು ಸಮಾರೋಪ ಅಧ್ಯಾಯವಾಗಿರುತ್ತದೆ. ಮೇಲಿನ ಎಲ್ಲಾ ಅಧ್ಯಾಯಗಳಿಂದ ಬಂದ ಚರ್ಚೆಗಳು, ಮುಂಡಾಲ ಮಹಿಳೆಯರ ಸಬಲೀಕರಣಕ್ಕೆ ಹಾಗೂ ಅಭಿವೃದ್ಧಿಗೆ ಬೇಕಾದ ಸಲಹೆ ಸೂಚನೆಗಳನ್ನು ಅಧ್ಯಾಯದಲ್ಲಿ ನೀಡಲಾಗಿದೆ.

**ಉಲ್ಲೇಖಗಳು:**


- ಪಿ.ಕಮಲಾಕ್ಷ , ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ , ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪,
- ಮಂಜೇಶ್ವರ ಗಣಪತಿ ರಾವ್ ಐಗಳ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ , ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ,೧೯೨೩
- ಡಾ|ಆರ್.ಇಂದಿರಾ, ಮಹಿಳೆ, ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
- ಡಾ| ಟಿ.ಆರ್.ಚಂದ್ರಶೇಖರ್, ಮಹಿಳೆಯರ ನಿಯೋಗ ಮತ್ತು ಸಾಮಾಜಿಕ ಬದಲಾವಣೆ, ಅಭಿವೃದ್ಧಿ ಅಧ್ಯಯನ, ಸಮಾಜ ವಿಜ್ಞಾನ ಪತ್ರಿಕೆ, ಸಂಪುಟ ೨, ಸಂಚಿಕೆ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
- ಸುನಿತಾ ಆರ್ಯ 'ದಲಿತ್ ಆಂಡ್ ಬ್ಯಾಕ್‌ವರ್ಡ್ ವಿಮೆನ್' ಎಡುಕೇಶನಲ್ ಪಬ್ಲಿಕೇಶರ್ಸ್ ಆಂಡ್ ಡಿಸ್ಟಿಬ್ಯೂಟರ್ಸ್, ನ್ಯೂ ದೆಹಲಿ ೨೦೧೦
- ಜೋನಾಥನ್ ಪಿ ರವರ ಲೇಖನ 'ಸೋಶಿಯಲ್ ಪ್ರೊಟೆಕ್ಷನ್ ಆಂಡ್ ಸೋಶಿಯಲ್ ರಿಲೇಶನ್ಸ್ : ಎವಿಡೆನ್ಸ್ ಪ್ರೊಮ್ ಶೆಡ್ಯೂಲ್ಡ್ ಕಾಸ್ಟ್ ವಿಮೆನ್ ಅಸೋಶಿಯೇಶನ್ ಇನ್ ರೂರಲ್ ಸೌತ್ ಇಂಡಿಯಾ'2011
- ಡಾನ ದನ್; ಜಂಡರ್ ಇನ್ ಇಕ್ವ್ಯಾಲಿಟಿ ಇನ್ ಎಡುಕೇಶನ್ ಆಂಡ್ ಎಂಪ್ಲಾಯ್ ಮೆಂಟ್ ಇನ್ ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಇಂಡಿಯಾ; ಪಾಪಲೇಶನ್ ರಿಸರ್ಚ್ ಆಂಡ್ ಪಾಲಿಸಿ ರಿವಿವ್; ೧೯೯೩
- ಕರುಣಾ ಚನ್ನಾ; ಅಸೆಸಿಂಗ್ ಹೈಯರ್ ಎಡುಕೇಶನ್; ದಿ ಡೈಲಮಾ ಆಪ್ ಸ್ಕೂಲಿಂಗ್ ವಿಮೆನ್, ಮೈನೋರಿಟೀಸ್, ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಕನ್‌ಟೆಂಪರರೀ ಇಂಡಿಯಾ; ವಾಲ್ಯೂಮ್ ೨೬;೧೯೯೩
- ಕಾರಡೆ, ಜಗನ್; ಅಕ್ಯುಪೇಶನ್ ಮೊಬಿಲಿಟಿ ಆಮ್ಯೋಂಗ್ ಶೆಡ್ಯೂಲ್ಡ್ ಕಾಸ್ಟ ಇನ್ ಇಂಡಿಯಾ; ಕೇಮ್‌ಬ್ರಿಡ್ಜ್ ಸ್ಕೋಲರ್ಸ್ ಪಬ್ಲಿಶಿಂಗ್ ಯು.ಕೆ ೨೦೦೯
- ಬಿ.ಯು.ಸುಮಾ, ದಲಿತ ಮಹಿಳೆ ಬದಲಾಗುತ್ತಿರುವ ರೂಪಕ, ಪ್ರಜಾವಾಣಿ ಪತ್ರಿಕೆ, ಎಪ್ರಿಲ್ ೧೭, ೨೦೧೨

# ಅಧ್ಯಾಯ ೨.

# ಕರ್ನಾಟಕದಲ್ಲಿರುವ ಪರಿಶಿಷ್ಟ ಜಾತಿ ಸಮುದಾಯಗಳ ಸ್ಥಿತಿಗತಿಗಳು

ನಮ್ಮ ಸಮಾಜದಲ್ಲಿ ಅಭಿವೃದ್ಧಿಯಿಂದ ವಂಚಿತರಾದ ಹಾಗೂ ತೀವ್ರ ದುಸ್ಥಿತಿಯಲ್ಲಿರುವ ಜನ ಸಮುದಾಯವೆಂದರೆ ಪರಿಶಿಷ್ಟರು. ೧೯೧೯ ರಲ್ಲಿ ಭಾರತದ ಗವರ್ನರ್ ಜನರಲ್ ಕೌನ್ಸಿಲ್ , ಸರ್ ಸೌತ್ ಬ್ಯೂರೊ ಅವರ ಅಧ್ಯಕ್ಷತೆಯಲ್ಲಿ ಅಸ್ಪೃಶ್ಯ ವರ್ಗದವರ ಬಗ್ಗೆ ವರದಿಯನ್ನು ತಯಾರಿಸಲು ಸಮಿತಿಯನ್ನು ನೇಮಕ ಮಾಡಲಾಯಿತು. ಸರ್ ಸೌತ್ ಬ್ಯೂರೊರವರ ವರದಿಯನ್ನು ಕೇಂದ್ರ ಸರಕಾರ ಹಾಗೂ ಮೈಸೂರು ಸರಕಾರ ಅಂಗೀಕರಿಸಿ, ಭಾರತದ ಅಸ್ಪೃಶ್ಯ ವರ್ಗದವರನ್ನು ಡಿಪ್ರೆಸ್ಡ್ ಕ್ಲಾಸಸ್ ಎಂಬುದಾಗಿ ಪರಿಗಣಿಸಿ, ಮುಂದೆ ಕೇಂದ್ರ ಸರಕಾರ ಅದೇ ವರ್ಷ(೧೯೧೯) ಒಂದು ಸೆಂಟ್ರಲ್ ಆಕ್ಟನ್ನು ರಚಿಸಿ ಜಾರಿಗೊಳಿಸಿತು. ಅನಂತರ ಬ್ರಿಟಿಷ್ ಸರಕಾರ ಮುಂದಿನ ತನ್ನ ಎಲ್ಲಾ ಸರಕಾರಿ ವ್ಯವಹಾರಗಳಲ್ಲಿ ಭಾರತದ ಅಸ್ಪೃಶ್ಯ ವರ್ಗದವರನ್ನು ಅಧಿಕೃತವಾಗಿ 'ಡಿಪ್ರೆಸ್ಡ್ ಕ್ಲಾಸಸ್' ಎಂಬುದಾಗಿ ಕರೆದು, ಸರಕಾರಿ ಗಜೆಟ್ ನಲ್ಲಿ ಪ್ರಕಟಿಸಿತು. ಮುಂದೆ ೧೯೩೫ ರಲ್ಲಿ ಕೇಂದ್ರ ಸರಕಾರ ಪುನಃ ಸೆಂಟ್ರಲ್ ಆಕ್ಟ್ ನ್ನು ಮಾಡಿ, ಭಾರತದ ಅಸ್ಪೃಶ್ಯ ವರ್ಗದವರನ್ನು ಹಾಗೂ ಗುಡ್ಡಗಾಡು ವರ್ಗದವರನ್ನು , ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳೆಂದು ಕರೆಯಲಾಯಿತು.(ಕಮಲಾಕ್ಷ ಪಿ)

## ೨.೧ ಕರ್ನಾಟಕದಲ್ಲಿರುವ ಪರಿಶಿಷ್ಟ ಜಾತಿ ಸಮುದಾಯಗಳ ಅಂಕಿ ಅಂಶಗಳ ವಿವರ

ಕರ್ನಾಟಕದಲ್ಲಿ ೧೯೭೦-೮೦ ರ ದಶಕದಲ್ಲಿ ರಾಜ್ಯದಲ್ಲಿರುವ ಇತರೆ ಅಸ್ಪೃಶ್ಯ ವರ್ಗದ ಜಾತಿಗಳು, ಪರೀಷ್ಕೃತ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡವು. ಪ್ರಸ್ತುತ ಪರಿಶಿಷ್ಟ ಜಾತಿಯಲ್ಲಿ ಸುಮಾರು ೧೦೧ ಉಪ ಜಾತಿಗಳಿವೆ. ಪರಿಶಿಷ್ಟ ಜಾತಿಗಳ ಜನಸಂಖ್ಯಾ ವಿಶ್ಲೇಷಣೆ: ೧೯೬೧ ರ ಜನಗಣತಿಯ ಪ್ರಕಾರ ૩.೧೨ ಮಿಲಿಯದಷ್ಟದ್ದ ಜನಸಂಖ್ಯೆ, ೨೦೦೧ ರಲ್ಲಿ ೮.೫೬ ಮಿಲಿಯದಷ್ಟಿದೆ. ಜಿಲ್ಲಾವಾರು ಗಮನಿಸಿದಾಗ ೨೦೦೧ ರ ಜನಗಣತಿಯ ಪ್ರಕಾರ ಬೆಂಗಳೂರು ನಗರದಲ್ಲಿ ಅತ್ಯಂತ ಅಧಿಕ ಸಂಖ್ಯೆಯ(೮,೫೧,೦೪೭), ತದನಂತರ ಗುಲ್ಬರ್ಗಾ (೭,೧೭,೫೯೫) ಹಾಗೂ ಕೋಲಾರ ಜಿಲ್ಲೆಯಲ್ಲಿ (೬,೭೧,೬೯೨) ಪರಿಶಿಷ್ಟ ಜಾತಿಯವರಿದ್ದಾರೆ. ಜಿಲ್ಲಾವಾರು ಅತ್ಯಂತ ಕಡಿಮೆ ಪರಿಶಿಷ್ಟ ಜಾತಿಯ ಜನಸಂಖ್ಯೆಯಿರುವ ಜಿಲ್ಲೆಗಳು ಈ ರೀತಿಯಾಗಿವೆ, ಕೊಡಗು(೬೭,೪೨೨), ಉಡುಪಿ (೬೭,೬೮೯) ಹಾಗೂ ಉತ್ತರಕನ್ನಡ ಜಿಲ್ಲೆ(೧,೦೧,೮೯೬). ಶೇಕಡಾವಾರು ಗಮನಿಸಿದಾಗ ಕೋಲಾರ(೨೬.೬%), ಚಾಮರಾಜನಗರ (೨೪.೬%), ಗುಲ್ಬರ್ಗಾ (೨૩.೦೧%)ದಲ್ಲಿ ಹೆಚ್ಚಿನ ಪರಿಶಿಷ್ಟ ಜಾತಿಯ ಜನರಿದ್ದಾರೆ. ಕಡಿಮೆ ಶೇಕಡವಾರು ಪರಿಶಿಷ್ಟ ಜನಸಂಖ್ಯೆಯಿರುವ ಜಿಲ್ಲೆಗಳು, ಉಡುಪಿ (೬.೧%), ದಕ್ಷಿಣ ಕನ್ನಡ(೬.೯%) ಹಾಗೂ ಉತ್ತರ ಕನ್ನಡ ಜಿಲ್ಲೆ(೭.೫%) (ಜನಗಣತಿ ವರದಿ-೨೦೦೧)

ನಕ್ಷೆ ೨.೧.೧ ಜಿಲ್ಲಾವಾರು ಪರಿಶಿಷ್ಟ ಜಾತಿಯ ಜನಸಂಖ್ಯೆಯ ವಿಭಜನೆಯ



ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಯ ಜನರು ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿದ್ದಾರೆ (೬೬.೦೧%) ಹಾಗೂ ನಗರ ಪ್ರದೇಶದಲ್ಲಿ ಇವರ ಜನಸಂಖ್ಯೆ ಶೇಕಡಾ ೩೩.೯೯ ರಷ್ಟಿದೆ. ೧೯೯೧ ರಲ್ಲಿ ೯೬೨ ರಷ್ಟಿದ್ದ ಲಿಂಗಾನುಪಾತವು ೨೦೦೧ ರಲ್ಲಿ ೯೭೩ ರಷ್ಟಿತ್ತು.

**ಕೋಷ್ಟಕ ೨.೧.೧**

**ರಾಜ್ಯದ ಪರಿಶಿಷ್ಟ ಜಾತಿಗಳ ಸಾಕ್ಷರತಾ ಪ್ರಮಾಣ**

| ವಿವರಗಳು | | ರಾಜ್ಯದ ಒಟ್ಟು ಮೊತ್ತ | | ಪರಿಶಿಷ್ಟ/ ದಲಿತರು | |
|---|---|---|---|---|---|
| | | 1991 | 2001 | 1991 | 2001 |
| 1. ಜನಸಂಖ್ಯೆ(ಲಕ್ಷಗಳಲ್ಲಿ) | ಒಟ್ಟು | 449.77 | 527.34 | 92.85 (20.64) | 120.28 (22.81) |
| | ಮ | 220.25 | 258.77 | 45.52 (20.66) | 59.31 (22.92) |
| | ಪು | 229.51 | 268.56 | 47.33 (20.62) | 60.95 (22.69) |
| 2. ಅಕ್ಷರಸ್ಥರು(ಲಕ್ಷಗಳಲ್ಲಿ) | ಒಟ್ಟು | 210.23 | 307.75 | 28.22 (13.43) | 52.49 (17.06) |
| | ಮ | 81.14 | 129.57 | 9.35 (11.49) | 20.23 (15.61) |
| | ಪು | 128.82 | 178.18 | 18.87 (14.65) | 32.26 (18.10) |
| 3. ಅನಕ್ಷರಸ್ಥರು((ಲಕ್ಷಗಳಲ್ಲಿ) | ಒಟ್ಟು | 164.85 | 151.33 | 46.87 (28.38) | 49.33 (31.60) |
| | ಮ | 102.22 | 95.96 | 27.40 (26.80) | 30.60 (31.30) |
| | ಪು | 62.63 | 55.37 | 19.38 (30.99) | 19.29 (34.84) |

ಮೂಲ: ಜನಗಣತಿ ವರದಿ ೨೦೦೧,(ಡಾ.ಟಿ.ಆರ್.ಚಂದ್ರಶೇಖರ್)

ಪರಿಶಿಷ್ಟ ಜಾತಿಗಳ ಸಾಕ್ಷರತಾ ಪ್ರಮಾಣವನ್ನು ಗಮನಿಸಿದಾಗ ೧೯೯೧ ರಲ್ಲಿ ಶೇಕಡಾ ೧೩.೪೩ ರಷ್ಟಿದ್ದರೆ ೨೦೦೧ ರಲ್ಲಿ ಅವರ ಪಾಲು ಶೇಕಡಾ ೧೭.೦೬ರಷ್ಟು ಏರಿದೆ. ಅನಕ್ಷರಸ್ಥರ ಸಂಖ್ಯೆ ಶೇಕಡಾ ೨೮.೩೮ ರಿಂದ ಶೇಕಡಾ ೩೧.೬೦ ರಷ್ಟು ಏರಿಕೆಯಾಗಿದೆ. ಅದರಲ್ಲೂ ಮಹಿಳಾ ಅನಕ್ಷರಸ್ಥರ ಸಂಖ್ಯೆಯು ಹೆಚ್ಚಾಗಿದೆ.(೨೬.೮೦% ದಿಂದ ೩೧.೩೦%).

೨೦೦೧ ರ ಜನಗಣತಿಯ ಪ್ರಕಾರ ಶೇ. ೭೮.೪ ರಷ್ಟು ಮುಖ್ಯ ದುಡಿಮೆಗಾರಿದ್ದಾರೆ, ಒಟ್ಟು ದುಡಿಮೆಗಾರರಲ್ಲಿ ಶೇಕಡಾ ೪೩.೮ ರಷ್ಟು ಕೃಷಿ ಕೂಲಿಕಾರ್ಮಿಕರು, ಇತರ ದುಡಿಮೆಗಾರರು ೩೩.೦೧%, ೨೦.೦೫ ಶೇಕಡಾ ಕೃಷಿಕರು ಹಾಗೂ ೨.೫ ಶೇಕಡದಷ್ಟು ಜನರು ಗೃಹ ಕೈಗಾರಿಕೆಗಳಲ್ಲಿ ತೊಡಗಿಕೊಡಿರುತ್ತಾರೆ.

**ಪರಿಶಿಷ್ಟ ಮಹಿಳೆಯರ ದುಡಿಮೆ.**

ದುಡಿಮೆಯ ಒತ್ತಡವು ಪರಿಶಿಷ್ಟ ಮಹಿಳೆಯರಿಗೆ ಅಧಿಕವಾಗಿದೆ. ಕರ್ನಾಟಕದ ಒಟ್ಟು ದುಡಿಮೆಗಾರರಲ್ಲಿ ಶಿಷ್ಟರಿಗೆ ಸಂಬಂಧಿಸಿದಂತೆ ಮಹಿಳಾ ದುಡಿಮೆಗಾರರ ಪ್ರಮಾಣ ಕೇವಲ ಶೇ.೨೬.೦೯. ಆದರೆ ಪರಿಶಿಷ್ಟರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇ ೩೪.೨೫. ಈಗಾಗಲೇ ತಿಳಿಸಿರುವಂತೆ ಪರಿಶಿಷ್ಟರಿಗೆ ಸಂಬಂಧಿಸಿದಂತೆ

ದುಡಿಮೆಯ ವ್ಯಾಪ್ತಿ ಸೀಮಿತವಾದುದು. ಅಲ್ಲಿ ವಿಕಲ್ಪಗಳು ತುಂಬಾ ಕಡಿಮೆ. ಪರಿಶಿಷ್ಟ ಮಹಿಳೆಯರ ದುಡಿಮೆ ಅವಕಾಶಗಳು ತುಂಬಾ ಸೀಮಿತವಾಗಿವೆ. ಲಿಂಗಶಾಹಿ ವಿಚಾರ ಪ್ರಣಾಳಿಕೆಯಿಂದಾಗಿ ಕೌಟುಂಬಿಕ ದುಡಿಮೆಯನ್ನು ಅವರು ನಿರ್ವಹಿಸಬೇಕಾಗಿದೆ. ಅಸ್ಪೃಶ್ಯತೆ ಮತ್ತು ಬಡತನದ ಕಾರಣವಾಗಿ ಅವರು ಮನೆಯ ಹೊರಗೆ ಕೂಲಿಯನ್ನು ಮಾಡಬೇಕಾಗಿದೆ. ಗ್ರಾಮೀಣ ಪ್ರದೇಶದ ಪರಿಶಿಷ್ಟ ಪುರುಷ ದುಡಿಮೆಗಾರರು ಇಂದು ದುಡಿಮೆಯನ್ನು ಅರಸಿಕೊಂಡು ನಗರ ಪ್ರದೇಶಕ್ಕೆ ವಲಸೆ ಹೋಗುವುದು ಕಂಡುಬರುತ್ತದೆ. ಸಂಚಾರ-ಸಂಚಲನೆಯೆಂಬುದು ಪುರುಷ ದುಡಿಮೆಗಾರರಿಗೆ ಸಮಸ್ಯೆಯಲ್ಲ. ಆದರೆ ಕೌಟುಂಬಿಕ ದುಡಿಮೆಯ ಜವಾಬ್ದಾರಿ ಹಾಗೂ ಮಕ್ಕಳ ಮತ್ತು ವೃದ್ಧರ ಪಾಲನೆಯ ಜವಾಬ್ದಾರಿಯು ಮಹಿಳೆಯರ ಮೇಲಿರುವುದರಿಂದ ಮಹಿಳಾ ದುಡಿಮೆಗಾರರು ವಲಸೆ ಹೋಗುವುದು ಸಾಧ್ಯವಾಗುವುದಿಲ್ಲ. ಇದಕ್ಕಿಂತ ಮುಖ್ಯವಾಗಿ ಸಂಚಾರ-ಸಂಚಲನೆಯು ಮಹಿಳಾ ದುಡಿಮೆಗಾರರಿಗೆ ಸುಲಭದ ಸಂಗತಿಯಲ್ಲ.

ಅಸ್ಪೃಶ್ಯತೆಯು ಮಹಿಳೆಯರ ಅಭಿವೃದ್ಧಿಗೆ ತುಂಬಾ ಮಾರಕವಾದ ಸಂಗತಿಯಾಗಿ ಬಿಟ್ಟಿದೆ. ಈ ಸಂಗತಿಯು ಅಭಿವೃದ್ಧಿ ಕುರಿತ ಚರ್ಚೆಯಲ್ಲಿ ಪ್ರಧಾನ ಸ್ಥಾನವನ್ನು ಪಡೆದುಕೊಂಡಿಲ್ಲ. ಪರಿಶಿಷ್ಟ ಮಹಿಳಾ ದುಡಿಮೆಗಾರರ ಅಭಿವೃದ್ಧಿಯನ್ನು ಸರ್ಕಾರವು ಪ್ರತ್ಯೇಕವಾಗಿ ವಿಶೇಷವಾಗಿ ನಿರ್ವಹಿಸುವ ಅಗತ್ಯವಿದೆ೧. ಪುರುಷಶಾಹಿಯು ಪರಿಶಿಷ್ಟರಿಗೆ ಮತ್ತು ಶಿಷ್ಟರಿಗೆ ಸಮಾನವಾಗಿದೆ. ಆದರೆ ಇದರ ಪರಿಣಾಮಗಳು ಪರಿಶಿಷ್ಟ ಮಹಿಳೆಯರಿಗೆ ಹೆಚ್ಚು ಆಘಾತಕಾರಿಯಾಗಿವೆ. ಕೋಷ್ಟಕ ೮ರಲ್ಲಿ ಮಹಿಳೆಯರ ದುಡಿಮೆಯ ಶಿಷ್ಟ ಮತ್ತು ಪರಿಶಿಷ್ಟ ನೆಲೆಗಳನ್ನು ತೋರಿಸಲಾಗಿದೆ. ದುಡಿಮೆಯ ಒತ್ತಡವು ಶಿಷ್ಟ ಮಹಿಳೆಯರಿಗಿಂತ ಪರಿಶಿಷ್ಟ ಮಹಿಳೆಯರಿಗೆ ಅಧಿಕವಾಗಿರುವುದನ್ನು ಅಲ್ಲಿ ನೋಡಬಹುದಾಗಿದೆ. ಶಿಷ್ಟ ಮಹಿಳೆಯರಿಗೆ ಸಂಬಂಧಿಸಿದಂತೆ ಭೂರಹಿತ ಕೃಷಿ ದಿನಗೂಲಿ ಮಹಿಳೆಯರ ಪ್ರಮಾಣವು ಪರಿಶಿಷ್ಟರಲ್ಲಿ ಶೇ.೫೦.೧೬ರಷ್ಟಿದ್ದರೆ ಶಿಷ್ಟ ಮಹಿಳೆಯರಲ್ಲಿ ಅದರ ಪ್ರಮಾಣ ಕೇವಲ ಶೇ.೨೭.೨೧. ಕೃಷಿ ಅವಲಂಬನೆಯ ಪ್ರಮಾಣದಲ್ಲೂ ಪರಿಶಿಷ್ಟರಿಗೆ ಸಂಬಂಧಿಸಿದಂತೆ ಅದು ಅಧಿಕವಾಗಿದೆ. ಪರಿಶಿಷ್ಟ ಮಹಿಳಾ ದುಡಿಮೆಗಾರರಲ್ಲಿ (೧೫.೨೧ಲಕ್ಷ) ಸರಿಸುಮಾರು ಶೇ.೭೦.೪೧ರಷ್ಟು ಮಹಿಳಾ ದುಡಿಮೆಗಾರರು ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ. ಕೃಷಿ ಅವಲಂಬನೆ ಶಿಷ್ಟ ಮಹಿಳಾ ದುಡಿಮೆಗಾರರಿಗೆ ಸಂಬಂಧಿಸಿದಂತೆ ಶೇ.೫೮.೩೨ರಷ್ಟಿದೆ.

ಕೋಷ್ಟಕ ೨.೧.೨

ಪರಿಶಿಷ್ಟ ಮಹಿಳೆಯರ ದುಡಿಮೆಗಾರರ ವಿವರ

| ಕ್ರಮ ಸಂಖ್ಯೆ | ವಿವರಗಳು | ಒಟ್ಟು | | ಪರಿಶಿಷ್ಟ /ದಲಿತರು | | ಶಿಷ್ಟರು /ದಲಿತೇತರರು | |
|---|---|---|---|---|---|---|---|
| | | 1991 | 2001 | 1991 | 2001 | 1991 | 2001 |
| 1. | ಒಟ್ಟು ಮಹಿಳಾ ದುಡಿಮೆಗಾರರು | 50.07 | 54.13 | 13.97 | 15.21 | 36.10 | 38.92 |
| 2. | ಒಟ್ಟು ಮಹಿಳಾ ಸಾಗುವಳಿದಾರರು | 12.88 (25.72 | 16.19 (29.91) | 2.30 (13.97) | 3.08 (20.25) | 10.58 (29.92) | 12.11 (31.12) |
| 3. | ಒಟ್ಟು ಮಹಿಳಾ ಭೂ ರಹಿತ ಕೃಷಿ ದಿನಗೂಲಿಗಳು | 24.88 (49.69) | 18.22 (33.66) | 9.25 (66.21) | 7.63 (50.16) | 15.63 (43.30) | 10.59 (27.21) |
| 4. | ಒಟ್ಟು ಕೃಷಿ ಅವಲಂಬಿತ ದುಡಿಮೆಗಾರರು | 37.76 (75.09) | 33.41 (61.72 | 11.55 (82.68) | 10.71 (70.41) | 26.21 (72.60) | 22.70 (58.32) |

ಮೂಲ: ಜನಗಣತಿ ವರದಿ ೨೦೦೧,(ಡಾ|ಟಿ.ಆರ್.ಚಂದ್ರಶೇಖರ್)

ಮಹಿಳಾ ದುಡಿಮೆಗಾರ ಅಂಕಿ ಅಂಶಗಳಿಗೆ ಸಂಬಂಧಿಸಿದಂತೆ ಶಿಷ್ಟ ಮಹಿಳೆಯರಿಗೆ ಸಂಬಂಧಿಸಿದಂತೆ ಭೂರಹಿತ ಕೃಷಿ ದಿನಗೂಲಿ ಮಹಿಳೆಯರ ಪ್ರಮಾಣವು ಪರಿಶಿಷ್ಟರಲ್ಲಿ ಶೇ.೬೦.೧೬ರಷ್ಟಿದ್ದರೆ ಶಿಷ್ಟ ಮಹಿಳೆಯರಲ್ಲಿ ಅದರ ಪ್ರಮಾಣ ಕೇವಲ ಶೇ.೨೭.೨೧. ಕೃಷಿ ಅವಲಂಬನೆಯ ಪ್ರಮಾಣದಲ್ಲೂ ಪರಿಶಿಷ್ಟರಿಗೆ ಸಂಬಂಧಿಸಿದಂತೆ ಅದು ಅಧಿಕವಾಗಿದೆ. ಪರಿಶಿಷ್ಟ ಮಹಿಳಾ ದುಡಿಮೆಗಾರರಲ್ಲಿ (೧೫.೨೧ಲಕ್ಷ) ಸರಿಸುಮಾರು ಶೇ.೭೦.೪೧ರಷ್ಟು ಮಹಿಳಾ ದುಡಿಮೆಗಾರರು ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ. ಕೃಷಿ ಅವಲಂಬನೆ ಶಿಷ್ಟ ಮಹಿಳಾ ದುಡಿಮೆಗಾರರಿಗೆ ಸಂಬಂಧಿಸಿದಂತೆ ಶೇ.೫೮.೩೨ರಷ್ಟಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಪರಿಶಿಷ್ಟ ಜಾತಿಯ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

(ಡಾ ।ಟಿ.ಆರ್.ಚಂದ್ರಶೇಖರ್)

## ೨.೨ ದಲಿತ ಮಹಿಳೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

'ದಲಿತ ಮಹಿಳೆ' ಎನ್ನುವ ವಿಭಿನ್ನ ಸಾಮಾಜಿಕ ಘಟಕವಿದೆಯೇ ಎನ್ನುವುದೇ ಒಂದು ಮುಖ್ಯ ಪ್ರಶ್ನೆ. ಮಹಿಳೆಯರು ಯಾವುದೇ ಜಾತಿಯವರಾದರೂ, ದ್ವಿತೀಯ ದರ್ಜೆಯ ಪ್ರಜೆಗಳೇ ಆಗಿರುವುದರಿಂದ, 'ದಲಿತ ಮಹಿಳೆ' ಎನ್ನುವ ಇನ್ನೊಂದು ಪ್ರತ್ಯೇಕತೆಯ ಅಗತ್ಯವಿಲ್ಲ ಎನ್ನುವುದು ಬಹಳಷ್ಟು ಸ್ತ್ರೀ ವಾದಿ ಚಿಂತಕಿಯರ ಅಭಿಪ್ರಾಯ. ಆದರೆ ದಲಿತರ ಬದುಕಿನ ಸಾಮಾಜಿಕ- ಆರ್ಥಿಕ ವಿನ್ಯಾಸಗಳು ಹಾಗೂ ಅದನ್ನು ಹಾಗೆಯೇ ಉಳಿಸುವಲ್ಲಿ ಸದಾ ಜಾಗೃತವಾಗಿರುವ ರಾಜಕೀಯ ಹುನ್ನಾರಗಳಿಂದಾಗಿ 'ದಲಿತ ಮಹಿಳೆ'ಯರ ಬದುಕು ನಿಸ್ಸಂದೇಹವಾಗಿ, ಬೇರೆಲ್ಲಾ ಸ್ತರದ, ಜಾತಿಯ, ಧರ್ಮದ ಮಹಿಳೆಯರ ಬದುಕಿಗಿಂತ ವಿಭಿನ್ನವಾಗುತ್ತದೆ. ಈ

ಕಾರಣಕ್ಕಾಗಿ ದಲಿತ ಮಹಿಳೆಯರ ಬದುಕಿಗೆ ಸಾಮಾನ್ಯವಾಗಿ ಅನ್ವಯಿಸಬಹುದಾದ ಸರಳ ಗ್ರಹೀತಗಳನ್ನು ಅನ್ವಯಿಸಲಾಗುವುದಿಲ್ಲ. ಹಾಗೆಯೇ, 'ದಲಿತ ಮಹಿಳೆ'ಯರನ್ನು ಒಂದು ಏಕರೂಪಿ ವಿನ್ಯಾಸದಲ್ಲಿಟ್ಟು ನೋಡಲು ಕೂಡ ಸಾಧ್ಯವಿಲ್ಲ. ದಲಿತ ಮಹಿಳೆಯರನ್ನು ಇಂದು ಎಲ್ಲಾ ಕ್ಷೇತ್ರಗಳಲ್ಲಿ ನೋಡಬಹುದು. ಆದರೆ, ಈ ಸಂಖ್ಯೆ ಇತರ ಜಾತಿಯ ಮಹಿಳೆಯರ ಸಂಖ್ಯೆಗೆ ಹೋಲಿಸಿದರೆ ತುಂಬಾ ಕಡಿಮೆ.

೧೯ನೇ ಶತಮಾನದಲ್ಲಿ ಉಂಟಾದ ಭಾರತೀಯ ಪುನರುಜ್ಜೀವನದ ತಾತ್ವಿಕತೆಯ ಕಾರಣದಿಂದ ಇಲ್ಲಿನ ಉದಾರವಾದಿ ಧೋರಣೆಗಳು ರೂಪಿಸಿದ ಬಾಲ್ಯವಿವಾಹ ನಿಷೇಧ, ವಿಧವಾ ಪುನರ್ವಿವಾಹ, ಹೆಣ್ಣುಮಕ್ಕಳಿಗೆ ಶಿಕ್ಷಣದಂಥ ಸಾಮಾಜಿಕ ಪುನರುತ್ಥಾನದ ಕಾರ್ಯಕ್ರಮಗಳು ತಳಸ್ತರದ ಮಹಿಳೆಯರನ್ನು ಒಳಗೊಳ್ಳಲೇ ಇಲ್ಲ. ನಂತರ, ಆಧುನಿಕತೆಯ ಸವಲತ್ತು, ಸೌಲಭ್ಯಗಳು ಕೂಡ ಮೊದಲು ತಲುಪಿದ್ದು ದೇಶದ ಮೇಲುಜಾತಿಗಳಿಗೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅಂಬೇಡ್ಕರ್‌ರ ಹೋರಾಟದ ಫಲಿತಗಳು, ತಳಸ್ತರದ ವಿಮೋಚನೆಗಾಗಿ ಅವರು ಕಟ್ಟಿಕೊಟ್ಟ ತತ್ವ, ಸಂವಿಧಾನ ನೀಡಿದ ಸಾಮಾಜಿಕ ನ್ಯಾಯದ ಸೌಲಭ್ಯ ತಳಸ್ತರಗಳಿಗೆ, ಅದೂ ಆಂಶಿಕವಾಗಿ ದಕ್ಕಲಾರಂಭಿಸಿದ್ದು ಕೆಲವು ದಶಕಗಳಿಂದೀಚೆಗೆ ಮಾತ್ರ. ಇಲ್ಲಿಯೂ, ಮೊದಲು ಈ ಸವಲತ್ತು ಸಿಕ್ಕಿದ್ದು ಪುರುಷರಿಗೆ. ಆದ್ದರಿಂದ ದಲಿತ ಹೆಣ್ಣುಮಕ್ಕಳು ತೀರಾ ಇತ್ತೀಚೆಗಷ್ಟೇ ಸಾರ್ವಜನಿಕ ವಲಯಗಳಲ್ಲಿ ಕಾಣಿಸಿಕೊಳ್ಳಲಾರಂಭಿಸಿದ್ದಾರೆ. ಹೀಗೆ ಕಾಣಿಸಿಕೊಳ್ಳುತ್ತಿರುವ ಯಾವುದೋ ಒಂದು ವರ್ಗದ ದಲಿತ ಹೆಣ್ಣುಮಕ್ಕಳ ಕಥನಗಳೇ ಅಂತಿಮ ವಾಸ್ತವವಲ್ಲ. ಇವರ ಬದುಕಿಗೆ ಸಂಬಂಧಿಸಿದ ಅನೇಕ ನಿಷ್ಠುರ ವಾಸ್ತವಗಳಿವೆ. ಅವುಗಳನ್ನು ಅರ್ಥಮಾಡಿಕೊಂಡಾಗ ಈ ಹೆಣ್ಣು ಮಕ್ಕಳ ಬದುಕನ್ನು ಏಕೆ ವಿಭಿನ್ನವಾಗಿ ನೋಡಬೇಕೆಂಬ ಅಂಶ ಸ್ಪಷ್ಟವಾಗುತ್ತದೆ.

೨೦೦೧ರ ಜನಗಣತಿಯ ಪ್ರಕಾರ, ಒಟ್ಟು ೨೦ ಕೋಟಿ ದಲಿತರಲ್ಲಿ ಶೇ ೪೯.೯೬ರಷ್ಟು ದಲಿತ ಮಹಿಳೆಯರಿದ್ದಾರೆ. ಇದು ಇಡೀ ಭಾರತದ ಮಹಿಳಾ ಜನಸಂಖ್ಯೆಯಲ್ಲಿ ಶೇ೧೬.೩ರಷ್ಟಾಗುತ್ತದೆ. ಇವರಲ್ಲಿ ಶೇ ೪ ರಷ್ಟು ಜನರು ಕುಗ್ರಾಮಗಳಲ್ಲಿ ವಾಸಿಸುತ್ತಾರೆ. ಈ ಹೆಣ್ಣು ಮಕ್ಕಳು ಅವರ ಸಾಂಪ್ರದಾಯಿಕ ವೃತ್ತಿಗಳಾದ ಕಸಗುಡಿಸುವ, ಮಲಹೊರುವ, ಚಪ್ಪಲಿ ಹೊಲೆಯುವ, ದೇವದಾಸಿ, ಕೂಲಿಯಾಳು ಅಥವಾ ಜೀತದಾಳುಗಳಾಗಿ ದುಡಿಯುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಮನೆ ಕಟ್ಟುವ ಕೆಲಸಗಳಲ್ಲಿ, ಗಣಿಗಳಲ್ಲಿ ಮತ್ತು ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಪಾರಂಪರಿಕ ವೃತ್ತಿಗಳು ಹೊಸ ರೂಪದಲ್ಲಿ ಕಾಣಿಸಿಕೊಂಡಾಗಲೂ (ಉದಾ: ನಿರ್ಮಲ್ ಶೌಚಾಲಯವನ್ನು ಸ್ವಚ್ಛ ಮಾಡುವ ಕೆಲಸ) ಆ ಕೆಲಸವನ್ನು ಆಯಾ ವೃತ್ತಿಯವರು ಬಿಟ್ಟರೆ ಬೇರೆ ಯಾರೂ ಅದನ್ನು ಮಾಡುವುದಕ್ಕೆ ಒಪ್ಪುವುದಿಲ್ಲ.

ಇಲ್ಲಿ ಮೇಲ್ನೋಟಕ್ಕೆ ಸ್ಪಷ್ಟವಾಗುವ ಸಂಗತಿ ಏನೆಂದರೆ, ಇವು ತೀರಾ ನಿಕೃಷ್ಟ ಎಂದು ಭಾವಿಸಲಾಗಿರುವ ಮತ್ತು ಯಾರು ಬೇಕಾದರೂ ಇವರ ಮೇಲೆ ಅಧಿಕಾರ ಸಾಧಿಸಲು ಸಾಧ್ಯವಾಗುವಂಥ ವೃತ್ತಿಗಳು. ಆದ್ದರಿಂದ ಇವರು ಕೆಲಸ ಮಾಡುವ ಕಡೆಯಲ್ಲಿ ಇವರ ಮೇಲೆ ಅತ್ಯಾಚಾರ, ದೌರ್ಜನ್ಯ, ದೈಹಿಕ ಹಾಗೂ ಮಾನಸಿಕ ಹಿಂಸೆ

ತುಂಬಾ ಸುಲಭಸಾಧ್ಯವಾಗಿ ಬಿಡುತ್ತವೆ. ಇವೆಲ್ಲಾ ಅಸಂಘಟಿತ ಕ್ಷೇತ್ರಗಳು; ಆದ್ದರಿಂದ ಇವರ ಕೆಲಸದ ವೇತನಕ್ಕೆ ಯಾವ ರಕ್ಷಣೆಯೂ ಇರುವುದಿಲ್ಲ. ಕೆಲಸ ಇಲ್ಲದೆ ಹೋದರೆ, ದೈನಂದಿನ ಬದುಕನ್ನು ನಿರ್ವಹಿಸುವುದೂ ಕಷ್ಟವಾಗಿರುವುದರಿಂದ ತಮ್ಮ ಮೇಲಾಗುವ ಯಾವುದೇ ದೌರ್ಜನ್ಯವನ್ನೂ ಇವರು ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ. ಹಾಗೆ ಪ್ರತಿಭಟಿಸಿದಾಗಲೂ ಇತರ ಜಾತಿ, ಸರ್ಕಾರದ ಸಂಸ್ಥೆಗಳು ಮತ್ತು ಪಿತೃಪ್ರಧಾನ ಮೌಲ್ಯಗಳು ಬಹಳ ಸುಲಭವಾಗಿ ದಲಿತ ಹೆಣ್ಣು ಮಕ್ಕಳ ದನಿಯನ್ನು ಇಲ್ಲವಾಗಿಸಿ ಬಿಡುತ್ತವೆ. ಈ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುವ ಹೆಣ್ಣುಮಕ್ಕಳಿಗೆ ಬೆಂಬಲವನ್ನು ನೀಡುವ ವ್ಯವಸ್ಥೆಗಳು ಅಲ್ಲಲ್ಲಿ ರೂಪುಗೊಂಡಿದ್ದರೂ, ಅವು ಸಫಲವಾಗುವುದಕ್ಕಿಂತ ಹೆಚ್ಚಾಗಿ ವಿಫಲವಾಗಿರುವ, ಸಾಮಾಜಿಕ ಅಧಿಕಾರ ಮತ್ತು ಜಾತೀಯ ಯಜಮಾನಿಕೆಯಿಂದ ದುರ್ಬಲವಾಗಿರುವ ಉದಾಹರಣೆಗಳೇ ಹೆಚ್ಚು.

ಈ ದಲಿತ ಹೆಣ್ಣು ಮಕ್ಕಳೆಲ್ಲಾ ಬಡತನದ ರೇಖೆಯ ಕೆಳಗೆ ಬರುವಂಥವರು. ಇವರ ಆರ್ಥಿಕ ಪರಿಸ್ಥಿತಿಯ ಕಾರಣದಿಂದ ಮೂಲ ಸೌಕರ್ಯ, ಶಿಕ್ಷಣ, ವೈದ್ಯಕೀಯ ಸೌಲಭ್ಯ ಎಲ್ಲದರಿಂದ ವಂಚಿತರಾದವರು. ಇಂಥ ವರ್ಗಗಳಲ್ಲೇ ಪಿತೃಪ್ರಾಧಾನ್ಯ ಪ್ರಬಲವಾಗಿರುವುದರಿಂದ, ತಮ್ಮ ಮನೆಯ ಪುರುಷರ ದೌರ್ಜನ್ಯ ಮತ್ತು ದಬ್ಬಾಳಿಕೆಗೆ ಕೂಡ ದಲಿತ ಹೆಣ್ಣುಮಕ್ಕಳು ನಿರಂತರವಾಗಿ ತುತ್ತಾಗುತ್ತಾರೆ.

ದಲಿತ ಮಹಿಳೆಯರ ಈ ಸ್ಥಿತಿ ಇನ್ನೂ ಶೋಚನೀಯವಾಗಿರುವ ಬೆಳವಣಿಗೆಗಳು ಇತ್ತೀಚಿನ ಎರಡು ದಶಕಗಳಿಂದೀಚೆಗೆ ಅವ್ಯಾಹತವಾಗಿ ಘಟಿಸುತ್ತಿವೆ. ಯುರೋಪಿಯನ್ ಪಾರ್ಲಿಮೆಂಟ್ ೨೦೦೬ರ ಡಿಸೆಂಬರ್‌ನಲ್ಲಿ ದಲಿತರ ಮಾನವ ಹಕ್ಕುಗಳನ್ನು ಕುರಿತು ಭಾರತದಲ್ಲಿ ಒಂದು ಠರಾವನ್ನು ಮಂಡಿಸಿತು. ಭಾರತದ ಹನ್ನೊಂದು ರಾಜ್ಯಗಳಲ್ಲಿ ಸಮೀಕ್ಷೆಯನ್ನು ನಡೆಸಿ ನೀಡಿದ ಈ ವರದಿಯಲ್ಲಿ ದಲಿತ ಹೆಣ್ಣು ಮಕ್ಕಳ ಮೇಲೆ ಹೆಚ್ಚುತ್ತಿರುವ ದೌರ್ಜನ್ಯದ ಅಂಕಿ ಅಂಶಗಳು ಆತಂಕ ಹುಟ್ಟಿಸುತ್ತವೆ. ಪ್ರತಿದಿನ ಮೂವರು ದಲಿತ ಮಹಿಳೆಯರ ಮೇಲೆ ಅತ್ಯಾಚಾರ ಮಾಡಲಾಗುತ್ತದೆ. ಹದಿನೆಂಟು ಜನರನ್ನು ನಗ್ನಗೊಳಿಸಿ ಮೆರವಣಿಗೆ ಮಾಡಲಾಗುತ್ತದೆ.

ಪ್ರತಿ ಹದಿನೆಂಟು ನಿಮಿಷಕ್ಕೊಮ್ಮೆ ದಲಿತರ ಮೇಲೆ ಆಕ್ರಮಣಗಳು ನಡೆಯುತ್ತವೆ. ಇದರಲ್ಲಿ ಕೂಲಿ ಸಂಬಳಕ್ಕೆಂದು ಹೋದ ಮಹಿಳೆಯರ ಮೇಲಿನ ಆಕ್ರಮಣಗಳೇ ಹೆಚ್ಚಾಗಿರುತ್ತವೆ, ಹೀಗೆ ಸುದೀರ್ಘವಾದ ವಿವರವನ್ನು ನೀಡುವ ಈ ಸಮೀಕ್ಷೆ, ೨೦೦೬ರಲ್ಲಿ ಒಟ್ಟು ೩೫,೨೦೮ ದಲಿತರ ಮೇಲೆ ನಡೆಸಿದ ಆಕ್ರಮಣಗಳ ವಿರುದ್ಧ ಮೊಕದ್ದಮೆಗಳನ್ನು ದಾಖಲು ಮಾಡಿದ್ದರೂ, ಇವುಗಳಲ್ಲಿ ಶಿಕ್ಷೆಗೊಳಗಾದವರ ಸಂಖ್ಯೆ ಮಾತ್ರ ಶೇಕಡ ೫ಕ್ಕಿಂತ ಕಡಿಮೆ ಎಂದೂ ಹೇಳುತ್ತದೆ.

ಈ ವಿವರಗಳು ದಲಿತ ಸಮುದಾಯಗಳಲ್ಲಿ ಪ್ರಾರಂಭವಾದ ಸಣ್ಣ ಸಂಚಲನದಿಂದ ಜಾತೀಯ ವ್ಯವಸ್ಥೆ ದಿಗ್ಭ್ರಮೆಗೊಂಡು ಈ ಸಂಚಲನದ ಹುಟ್ಟನ್ನಡಗಿಸುವ ಪ್ರಯತ್ನವಾಗಿರುವುದನ್ನು ಹೇಳುತ್ತದೆ. ಇದಕ್ಕೆ ಪೂರಕವಾಗಿ ಜಾಗತಿಕ ಆರ್ಥಿಕ ನೀತಿ ಕೂಡ ನೇರವಾಗಿ ದಲಿತ ಸಮುದಾಯಗಳ ಮೇಲೆಯೇ ತನ್ನ ಕರಾಳ ಪ್ರಭಾವವನ್ನುಂಟು

ಮಾಡುತ್ತಿದೆ. ಬದಲಾಗುತ್ತಿರುವ ಕೃಷಿ ನೀತಿಗಳು ಮತ್ತು ಸಮಾಜ ಸೇವೆಯಲ್ಲಿ ಕಡಿಮೆಯಾಗುತ್ತಿರುವ ಸರ್ಕಾರದ ವೆಚ್ಚವು ನೇರವಾಗಿ ದಲಿತ ಮಹಿಳೆಯರ ಆರೋಗ್ಯ, ಶಿಕ್ಷಣ, ರಕ್ಷಣೆ ಅಭಿವೃದ್ಧಿ ಮತ್ತು ಜೀವನಾಧಾರದ ಮೇಲೆ ನೇತ್ಯಾತ್ಮಕ ಪರಿಣಾಮವನ್ನುಂಟು ಮಾಡುತ್ತಿದೆ. ಶೈಕ್ಷಣಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳನ್ನು ಖಾಸಗಿ ವಲಯಗಳು ಆಕ್ರಮಿಸಿಕೊಳ್ಳುತ್ತಿರುವುದರಿಂದ, ಅವು ಹೆಚ್ಚು ದುಬಾರಿಯಾಗುತ್ತಿವೆ. ಇನ್ನು ಮುಂದೆ ದಲಿತ ಕುಟುಂಬಗಳು ಈ ವೆಚ್ಚಗಳನ್ನು ಭರಿಸಲಾರದೆ, ಗಂಡು ಮಕ್ಕಳನ್ನು ಮಾತ್ರ ಶಾಲೆಗೆ ಕಳಿಸಿ, ಹೆಣ್ಣು ಮಕ್ಕಳನ್ನು ಮನೆಯಲ್ಲೇ ಉಳಿಸಿಕೊಳ್ಳುವ ಸಾಧ್ಯತೆಗಳೇ ಹೆಚ್ಚು. ಹಾಗೆಯೇ ಔದ್ಯೋಗಿಕ ಕ್ಷೇತ್ರಗಳಿಗೆ ಅಗತ್ಯವಾಗಿರುವ ತರಬೇತಿಗಳನ್ನೂ ಗಂಡು ಮಕ್ಕಳ ಪಾಲಿಗೆ ಈ ಕುಟುಂಬಗಳು ಮೀಸಲಾಗಿಡಲಾರಂಭಿಸಿವೆ.

ಹೀಗೆ, ಆಧುನಿಕೋತ್ತರ ಕಾಲಘಟ್ಟದ ಸಾಮಾಜಿಕ, ಆರ್ಥಿಕ ನೀತಿಗಳು ದಲಿತ ಮಹಿಳೆಯರ ಬದುಕಿಗೆ ಕಂಟಕಪ್ರಾಯ ಆಗಲಾರಂಭಿಸಿವೆ. ದಲಿತರ ಮೇಲೆ ಉಂಟಾಗುವ ದೌರ್ಜನ್ಯವನ್ನು ತಡೆಗಟ್ಟುವುದಕ್ಕಾಗಿ ಭಾರತ ಸರ್ಕಾರದ ೧೯೫೫ರಲ್ಲಿ 'ನಾಗರಿಕ ಹಕ್ಕುಗಳ ರಕ್ಷಣಾ ಕಾಯ್ದೆ'ಯಾಗಲಿ, ೧೯೮೯ರ ಪರಿಶಿಷ್ಟ ಜಾತಿ-ಪರಿಶಿಷ್ಟ ವರ್ಗಗಳ ಮೇಲಿನ 'ದೌರ್ಜನ್ಯ ತಡೆ ಕಾಯ್ದೆ'ಯಾಗಲಿ ಹೆಚ್ಚು ಉಪಯೋಗಕ್ಕೆ ಬರುವುದಿಲ್ಲ. ಏಕೆಂದರೆ, ದಲಿತ ಮಹಿಳೆಯರು ಮತ್ತು ಅವರ ಕುಟುಂಬದವರು ಕಾನೂನಿನ ನೆರವನ್ನು ಪಡೆಯಲು ಅಂಜುತ್ತಾರೆ. ಇನ್ನೊಂದು ಮೊಕದ್ದಮೆ ಹೂಡಿದಾಗಲೂ ಅದು ಪ್ರಬಲ ಜಾತಿಗಳ ರಾಜಕೀಯದಲ್ಲಿ ಪ್ರಯೋಜನವಾಗದೆ ಹೋಗುತ್ತದೆ. ಹಾಗೆಯೇ ದಲಿತರ ಅಭಿವೃದ್ಧಿಗೆಂದು 'ಸ್ಪೆಷಲ್ ಕಾಂಪೋನೆಂಟ್ ಪ್ಲಾನ್' ಅಡಿಯಲ್ಲಿ ಸರ್ಕಾರ ಬಿಡುಗಡೆ ಮಾಡುವ ಹಣ ಕೂಡ ಫಲಾನುಭವಿಗಳಿಗೆ ದೊರಕದೆ ಹೋಗಿರುವ ಉದಾಹರಣೆಗಳೇ ಹೆಚ್ಚು.

ಸರ್ಕಾರದ ಕಾರ್ಯಕ್ರಮಗಳು ನಿಷ್ಕ್ರಿಯೆಯಾಗುತ್ತಿರುವ ಈ ಹಿನ್ನೆಲೆಯಲ್ಲಿ ದಲಿತ ಮಹಿಳೆಯರು ಯಾರತ್ತ ಮುಖ ಮಾಡಬೇಕೆಂಬ ಪ್ರಶ್ನೆ ಹುಟ್ಟುತ್ತದೆ. ದಲಿತ ಮಹಿಳೆಯರ ಹಕ್ಕುಗಳು, ಲಭ್ಯತೆಗಳು ಮತ್ತು ಅವುಗಳ ಸಾಧ್ಯತೆಗಳ ಬಗ್ಗೆ ಅರಿವನ್ನು ಸೃಷ್ಟಿಸುವ ಕಾರ್ಯಕ್ರಮಗಳನ್ನು ಅನೇಕ ಸ್ವಯಂಸೇವಾ ಸಂಘಗಳು (ಎನ್‌ಜಿಒ) ಹಮ್ಮಿಕೊಳ್ಳುತ್ತಿವೆ. ಆದರೆ, ಈ ಸಂಸ್ಥೆಗಳ ಮಿತಿಯಲ್ಲಿ ಹೆಚ್ಚು ಶಕ್ತಿಯುತವಾದ ಕಾರ್ಯಯಕ್ರಮಗಳನ್ನು ಹಾಕಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ದಲಿತ ಸಂಘಟನೆಗಳಲ್ಲಿ ಉಂಟಾಗಿರುವ ಒಡಕುಗಳು ಕೂಡ ಈ ಚಳವಳಿಯ ಉಗ್ರ ಹೋರಾಟವನ್ನು ಒಂದು ಸೀಮಿತ ಅರ್ಥಕ್ಕೆ ಇಳಿಸಿಬಿಟ್ಟಿವೆ. ಆದ್ದರಿಂದ ದಲಿತ ಮಹಿಳೆಯರ ಸ್ಥಿತಿ ಇಂದು 'ಅಭಿವೃದ್ಧಿ' ಮತ್ತು 'ನಾಗರಿಕ ಸಮಾಜ'ದ ಪರಿಕಲ್ಪನೆಗಳ ದ್ವಿಮುಖ ನೀತಿಯನ್ನು ತೋರಿಸುತ್ತಲೇ, ಅವರು ದೊಡ್ಡದೊಂದು ಸಾಮಾಜಿಕ ಸಂಘರ್ಷಕ್ಕೆ ಸಿದ್ಧರಾಗಬೇಕಾದ ಅಗತ್ಯವನ್ನೂ ಸೂಚಿಸುತ್ತವೆ.(ಬಿ.ಯು.ಸುಮಾ)

## ೨.೩ ದಲಿತ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳು

ಭಾರತದಲ್ಲಿ ಶೋಷಿತ ಸಮುದಾಯಗಳ ಹುಟ್ಟು ವರ್ಣವ್ಯವಸ್ಥೆಯ ಕಟ್ಟುನಿಟ್ಟಿನ ಆಚರಣೆಗಳಿಂದ ಪ್ರಾರಂಭಗೊಂಡಿತು. ಪ್ರಜ್ಞಾವಂತರೆನಿಸಿಕೊಂಡವರು ವೇದಗಳ ಕಾಲದಿಂದ ಮಾನವ ಶ್ರಮಕ್ಕನುಗುಣವಾಗಿ ಆತನ ಕೆಲಸವನ್ನು ವಿಭಜನೆಗೊಳಿಸಿದ್ದಾರೆ. ನಂತರ ಇದನ್ನು ಸಾರ್ವತ್ರೀಕರಣಗೊಳಿಸಿ ಮುಂದುವರೆಸಿಕೊಂಡೂ ಬಂದಿದ್ದಾರೆ, ಇದರ ಫಲವನ್ನು ನಮ್ಮ ಹಿಂದಿನ ಹಲವಾರು ಜನಾಂಗಗಳು, ಸಮುದಾಯಗಳು ಅನುಭವಿಸಿಕೊಂಡೇ ಬಂದಿವೆ. ಇಂದಿಗೂ ಇದು ಚಾಲ್ತಿಯಲ್ಲಿದೆ. ಅದರ ಶೈಲಿ ಮಾತ್ರ ರೂಪಾಂತರಗೊಂಡಿದೆ ಎನ್ನಬಹುದು. ಒಂದು ನಿಟ್ಟಿನಲ್ಲಿ, ಪ್ರಾಚೀನ ಕಾಲದಲ್ಲಿ ಪ್ರಜ್ಞಾವಂತ ಪಂಡಿತರ ಎದುರು ಕೆಳಸ್ತರದ ಮಾನವ ಜನಾಂಗಗಳ ಮುಖದರ್ಶನ ಕಡಿಮೆ ಇದ್ದುದರಿಂದ, ಈ ಜನಾಂಗವು ತಮ್ಮಷ್ಟಕ್ಕೆ ಗೆಡ್ಡೆ-ಗೆಣಸು ಸೇವಿಸಿಕೊಂಡು ತಮ್ಮದೇ ಸಂಪ್ರದಾಯಗಳಲ್ಲಿ ಬದುಕುತ್ತಿದ್ದರು. ಅಲ್ಲಿಯೋ ಇಲ್ಲಿಯೋ ಎಂಬಂತೆ ಇವರ ಮೇಲಿನ ದೌರ್ಜನ್ಯಗಳು ಕಂಡುಬರುತ್ತಿದ್ದವು. ಈ ದೌರ್ಜನ್ಯಗಳು ಅಮಾನವೀಯವಾಗಿದ್ದವು. ಆದರೆ ಇಂದು ಶಿಕ್ಷಣದ ಪ್ರಭಾವದಿಂದ ಕೆಳಸ್ತರದ ಸಮುದಾಯಗಳ ಮೇಲಿನ ಶೋಷಣೆಯ ಹಲವು ಮಜಲುಗಳು, ಪ್ರಕಾರಗಳು ಹಳ್ಳಿ, ಪಟ್ಟಣಗಳನ್ನೆದೆ ಭೀಕರವಾಗಿ ವ್ಯಾಪಿಸಿಕೊಂಡಿದೆ. ಇಲ್ಲಿ ಶಿಕ್ಷಣ ಋಣಾತ್ಮಕವಾಗಿ ಪ್ರತಿಸ್ಪಂದಿಸಿ ಕಾರ್ಯನಿರ್ವಹಿಸುತ್ತಿದೆ.

**ಅಸ್ಪೃಶ್ಯತೆ:**

ಅಸ್ಪೃಶ್ಯತೆಯ ಹುಟ್ಟು ಒಂದು ಸೀಮಿತ ವರ್ಗದ ಅಂದರೆ ವರ್ಣವ್ಯವಸ್ಥೆಯಲ್ಲಿ ಅತ್ಯುನ್ನತ ಸ್ಥಾನದಲ್ಲಿರುವವರು ಪ್ರಸ್ತುತಪಡಿಸಿ ಆಚರಿಸಿಕೊಂಡು ಬಂದ ಒಂದು ಸಿದ್ಧಾಂತ. ಇಂದು ಇದು ತನ್ನ ಸೀಮಿತ ವರ್ಗವ್ಯಾಪ್ತಿಯನ್ನು ಹಿಗ್ಗಿಸಿಕೊಂಡು ಸಮಾಜದ ಹೆಚ್ಚಿನ ಎಲ್ಲಾ ವರ್ಗಗಳು ಒಂದೆಡೆ ಸೇರಿ ಒಂದು ವರ್ಗವನ್ನು ಮಾತ್ರವೇ ಸೀಮಿತಗೊಳಿಸಿವೆ. ಭಾರತದ ಮಟ್ಟಿಗೆ ಈ ವರ್ಗವೇ 'ದಲಿತ ಸಮುದಾಯ'. ದೇಶದ ಒಟ್ಟು ಜನಸಂಖ್ಯೆಯ ಶೇಕಡಾ ೧೫.೫ರಷ್ಟು ಭಾಗವನ್ನು ಈ ಸಮುದಾಯ ಹೊಂದಿದೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರು ಈ ಸಮಸ್ಯೆಯಿಂದ ಬಳಲುತ್ತಿರುವವರು. ಅದರಲ್ಲಿಯೂ ಪರಿಶಿಷ್ಟ ಜಾತಿಯ ಬವಣೆ ತೀರಾ ನಿಕೃಷ್ಟ ಸ್ಥಿತಿಯಲ್ಲಿದೆ.

ಕೇವಲ ಖಾಸಗಿ ಪರಿಸರಗಳಲ್ಲಿ ಮಾತ್ರ ಇಂದು ದಲಿತರು ಅಮಾನವೀಯ ಹಾಗೂ ಮುಜುಗರದ ಅಸ್ಪೃಶ್ಯತೆಯನ್ನು ಅನುಭವಿಸುತ್ತಿದ್ದಾರೆ ಎಂಬುದು ಸತ್ಯಕ್ಕೆ ದೂರವಾದ ಮಾತು. ಬದಲಾಗಿ ಸಾರ್ವಜನಿಕ ಸ್ಥಳಗಳಾದ ಪಂಚಾಯಿತಿ, ಶಾಲೆ, ಆಸ್ಪತ್ರೆ, ಚಹಾ ಅಂಗಡಿ, ಬಸ್ ಇತ್ಯಾದಿ ಕಡೆಗಳಲ್ಲಿ ಇವರ ದೌರ್ಜನ್ಯ ಅಸ್ಪೃಶ್ಯತೆಯೊಂದಿಗೇ ಬೆಸೆದುಕೊಂಡಿದೆ. ಯಾರನ್ನು ನಾಗರೀಕರೆನಿಸಿಕೊಂಡವರು, ಶೈಕ್ಷಣಿಕವಾಗಿ ಅತೀ ಉನ್ನತ ಸ್ಥಾನದಲ್ಲಿರುವವರು ಎಂದು ಕರೆಯುತ್ತೇವೆಯೋ, ಅವರೇ ಇಂದು ಅಸ್ಪೃಶ್ಯತೆಯನ್ನು ಜೀವಂತವಾಗಿಡಲು ಪ್ರಯತ್ನಿಸುತ್ತಿದ್ದಾರೆ. ಪ್ರಾಚೀನ ಕಾಲದ ವರ್ಣ ವ್ಯವಸ್ಥೆಯಲ್ಲಿ ಮಾನವನ ಪ್ರತಿಸ್ಪಂದನೆಗಳು ಸತ್ಯದ ರೂಪದಲ್ಲಿದ್ದು,

ಅರಿವಿನ ಕೊರತೆಯಿಂದ ಇಂತಹ ಆಚರಣೆಗಳು ಪಾಲಿಸಲೇಬೇಕಾದ ಸಂಪ್ರದಾಯಗಳಾಗಿದ್ದವು. ಆದರೆ ಇಂದು ಅದು ಹಾಗಾಗಬೇಕಿಲ್ಲವಲ್ಲಾ? ಏಕೆಂದರೆ ಇಂದು ಅರಿವಿನ ಮೂಲಗಳು ಗಣನೀಯ ಪ್ರಮಾಣವಲ್ಲಿ ಏರಿಕೆಯಾಗಿವೆ. ಜಗತ್ತು ಎಣಿಸಲಾರದಷ್ಟು ಬದಲಾವಣೆಯತ್ತ ಸಾಗುತ್ತಿದೆ, ಆದರೆ ಜನತೆಯಲ್ಲಿ ಪ್ರಮಾಣಿಕತೆಯ ಬದಲು ಕಪಟ, ಮೋಸ, ರಾಜಕೀಯದ ದುರ್ಬಳಕೆಗಳು ಸೇರಿಕೊಂಡು ದಲಿತರ ಮೇಲಿನ ದೌರ್ಜನ್ಯ ಗಂಟೆಗಿಂತ ಗಂಟೆಗೆ ಭಿನ್ನವಾಗತೊಡಗಿದೆ.

**ಭೂಮಿಯ ಒಡೆತನ ಮತ್ತು ನೀರಿನ ಬಳಕೆ:**

ಪ್ರಾಚೀನ ಕಾಲದಿಂದ ಇಂದಿನವರೆಗೂ ಭೂಮಿಯ ಒಡೆತನ ಮತ್ತು ನೀರಿನ ಬಳಕೆಯ ಬಗ್ಗೆ ದಲಿತರ ಮೇಲೆ ಎಲ್ಲಿಲ್ಲದ ಕಟ್ಟುಪಾಡುಗಳನ್ನು ಮೇಲ್ವರ್ಗ ಹಾಕಿಕೊಂಡು ಬಂದಿದೆ. ಅದನ್ನು ಚಾಚೂ ತಪ್ಪದೇ ಈ ವರ್ಗವೂ ಪಾಲಿಸಿಕೊಂಡು ಬಂದಿದೆ. ಪ್ರತಿಭಟಿಸಲು ಬುದ್ಧಿಶಕ್ತಿ, ಆರ್ಥಿಕ ಅಡಚಣೆ, ಹೊಟ್ಟೆಪಾಡಿನ ಗತಿ ಇತ್ಯಾದಿ ಕೊರತೆಗಳೇ ಮೂಲಕಾರಣ. ಅಲ್ಲದೇ ದಲಿತರು ಹಿಂದೂ ಧರ್ಮದ ಭಾಗವಾಗಿದ್ದರಿಂದಲೋ ಏನೋ ಇಂದೂ ಅವರಿಗೆ ನಾವು ಕೆಳಜಾತಿಯವರು ಮೇಲಿನವರೊಡನೆ ಜಾಸ್ತಿಯಾಗಿ ಬೆರೆಯಬಾರದೆಂಬ ಅಂತರಂಗದ ಆತಂಕದ ಭಾವನೆ ಸದಾ ಕಾಡುತ್ತಿರುತ್ತದೆ. ಚಾರಿತ್ರಿಕವಾಗಿ ಹಿಂದುಳಿದಿದ್ದ ಈ ಸಮುದಾಯಕ್ಕೆ ಶಿಕ್ಷಣದ ಹೊರತಾಗಿಯೂ ಇನ್ನೂ ನಾವು ಕೀಳುಮಟ್ಟದವರೆಂಬ ಭಾವನೆ ಬಿದ್ದು ಹೋಗಿಲ್ಲ. ಶಿಕ್ಷಣದ ಕೊರತೆ ಹೊಂದಿದ ಬಡ ದಲಿತ ಸಮುದಾಯ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗಿದ್ದರೆ, ಅತ್ಯುನ್ನತ ಶಿಕ್ಷಣ ಪಡೆದ ದಲಿತ ಸಮುದಾಯ ಈ ರೀತಿಯ ಸಂದಿಗ್ಧ ಸಂಕೀರ್ಣ ಪರಿಸ್ಥಿತಿಯಲ್ಲಿ ಒದ್ದಾಡುತ್ತಿದ್ದಾರೆ.

ಅನಾದಿಕಾಲದಿಂದಲೂ ಈ ಸಮುದಾಯವು ಭೂಮಾಲಕರ ಕೈಕೆಳಗೆ ದುಡಿಯುತ್ತಾ ಬಂದವರು. ಅದರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದವರು ಶಾರೀರಿಕವಾಗಿ ಮುಟ್ಟಲು ಅರ್ಹರಾದರಿಂದಲೋ ಏನೋ ಬೆಟ್ಟಗುಡ್ಡಗಳಲ್ಲಿ ಒಂದಿಷ್ಟು ಜಾಗಮಾಡಿಕೊಂಡು ಬದುಕುತ್ತಿದ್ದರು. ಸರಕಾರದ ಯೋಜನೆಯಂತೆ ದಲಿತರಿಗೆ ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿಯವರಿಗೆ ಪ್ರತ್ಯೇಕವಾದ ಕಾಲನಿ ವ್ಯವಸ್ಥೆಯನ್ನು ವಾಸಸ್ಥಾನಕ್ಕಾಗಿ ಇಂದು ಮೀಸಲಿಡಲಾಗಿದೆ. ಒಂದು ವರದಿಯ ಪ್ರಕಾರ ಭಾರತದ ನಗರಗಳಲ್ಲಿ ಸುಮಾರು ೭, ೦೦, ೦೦೦ ದಲಿತರು ಶೌಚಾಲಯ ತೊಳೆಯುವವರು ಮತ್ತು ರಸ್ತೆ ಗುಡಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಅಂದರೆ ಕೆಲಸದ ವಿಧಾನ ಹಿಂದಿನಂತೆಯೇ ಇಂದೂ ಮುಂದುವರೆದುಕೊಂಡು ಬರುತ್ತಿದೆ.

ಕುಡಿಯಲು, ಮನೆಬಳಕೆ ಹಾಗೂ ಕೃಷಿ ಉದ್ದೇಶಕೋಸ್ಕರ ನೀರಿನ ಬಳಕೆ ಬಗೆಗಿನ ನಿಯಂತ್ರಣ ದಲಿತರ ಮೇಲಿನ ದೌರ್ಜನ್ಯದ ಇನ್ನೊಂದು ಆಯಾಮ. ಇಲ್ಲಿ ಅಸ್ಪೃಶ್ಯತೆಯ ಕರಿನೆರಳು ಅಧಿಕವಾಗಿ ಕಂಡುಬರುತ್ತದೆ. ಮಹಾರಾಷ್ಟ್ರದಲ್ಲಿ ಡಾ। ಬಿ. ಆರ್. ಅಂಬೇಡ್ಕರ್‌ವರಿಗೆ ತನ್ನ ಎಳವೆಯಲ್ಲಿ ಸಾರ್ವಜನಿಕ ಬಾವಿಕಟ್ಟೆಗೆ ಪ್ರವೇಶ ನಿರಾಕರಿಸಿದ ಘಟನೆಗಳು ಆಗಾಗ್ಗೆ ಕರ್ನಾಟಕದಲ್ಲಿ ಮರುಕಳಿಸುತ್ತಿವೆ. ದಲಿತರು ಗ್ರಾಮದ ಮೇಲ್ವರ್ಗದವರು

ಬಳಸುವ ನಳ್ಳಿ ನೀರನ್ನು ಬಳಸಲು ಇಂದಿಗೂ ಅವಕಾಶವಿಲ್ಲ. ಸಾರ್ವಜನಿಕ ಬಾವಿಕಟ್ಟೆ ಎಲ್ಲಾ ಸಮುದಾಯದವರನ್ನು ಪರಿಗಣಿಸಿ ನಿರ್ಮಿಸಿದಾದರೂ ಕೆಲವೆಡೆ ಪ್ರಬಲರೇ ಪಂಪಿನ ಮೂಲಕ ಯಾ ಇನ್ನಿತರ ಮೂಲಗಳಿಂದ ನೀರನ್ನು ಯಥೇಚ್ಚವಾಗಿ ಬಳಸಿಕೊಂಡು ದಲಿತರಿಗೆ ತಡೆಯೊಡ್ಡುತ್ತಿದ್ದಾರೆ. ಇನ್ನುಳಿದ ಪ್ರದೇಶಗಳಲ್ಲಿ ಶ್ರೀಮಂತರೇ ಈ ಸಾರ್ವಜನಿಕ ಬಾವಿಗಳಿಗೆ ದಲಿತರು ಬರುತ್ತಾರೆಂಬ ಕಾರಣಕ್ಕಾಗಿ ಆ ಬಾವಿ ಕಡೆ ತಲೆ ಹಾಕದೇ ಅದನ್ನು ದಲಿತರಿಗೆ ಮಾತ್ರ ಮೀಸಲಿಡುತ್ತಾರೆ.

**ಮೂಲಭೂತ ಸೌಕರ್ಯಗಳು:**

ಒಂದು ರಾಜ್ಯ ಯಾ ರಾಷ್ಟ್ರ ತನ್ನ ಪ್ರಜೆಗಳ ಮುಂದೆ ತನ್ನದೇ ಆದ ಜವಾಬ್ದಾರಿ ಹಾಗೂ ಉತ್ತರದಾಯಿತ್ವವನ್ನು ಹೊಂದಿರಬೇಕಾಗುತ್ತದೆ. ಜನತೆಯ ಆಸೆ-ಆಕಾಂಕ್ಷೆಗಳನ್ನು ಸಾಂವಿಧಾನಿಕವಾಗಿ ಈಡೇರಿಸಬೇಕಾದದ್ದು ಇದರ ಆದ್ಯ ಕರ್ತವ್ಯವೂ ಹೌದು. ಹಾಗೇಯೇ ತನ್ನ ನಾಗರೀಕರಿಗೆ ಮೂಲಭೂತ ಸೌಕರ್ಯಗಳಾದ ನೀರು, ವಿದ್ಯುಚ್ಚಕ್ತಿ, ಮನೆ, ಶಿಕ್ಷಣ, ಆರೋಗ್ಯ ಇತ್ಯಾದಿಗಳನ್ನು ಒದಗಿಸಿಕೊಡುವ ಜವಾಬ್ದಾರಿಯೂ ಇದರ ಮೇಲಿದೆ. ಇದನ್ನು ಪಡೆಯುವುದು ನಾಗರೀಕರ ಹಕ್ಕೂ ಹೌದು. ಆದರೆ ಭಾರತದ ಮಟ್ಟಿಗೆ ಈ ಎಲ್ಲಾ ಸೌಲಭ್ಯಗಳನ್ನು ಬಹಳ ಬುದ್ಧಿವಂತಿಕೆಯಿಂದ ಆರ್ಥಿಕವಾಗಿ ಸದೃಡವಾದ ಮೇಲ್ವರ್ಗದವರು ಮಾತ್ರ ಬಳಸಿಕೊಂಡಿದ್ದಾರೆ. ಹಿಂದುಳಿದವರು, ದಲಿತರು ಈ ಅವಕಾಶಗಳಿಂದ ವಂಚಿತರಾಗಿದ್ದಾರೆ. ದಲಿತರ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಿಭಿನ್ನವಾಗಿದ್ದು, ಈ ಎಲ್ಲಾ ಕ್ಷೇತ್ರಗಳಲ್ಲಿ ಒಗ್ಗಟ್ಟಿನ ಕೊರತೆಯನ್ನು ಈ ವರ್ಗ ಇಂದು ಎದುರಿಸುತ್ತಿದೆ. ಏಕೆಂದರೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಸಂಘಟಿತರಾದಾಗ ಮಾತ್ರ ಇಂದು ಸರಕಾರದ ಹಲವು ಸೌಲಭ್ಯಗಳನ್ನು ಪಡೆಯಬಹುದೆಂಬ ವಾತಾವರಣ ನಿರ್ಮಾಣವಾಗಿದೆ.

ನಾಗರೀಕರೆನಿಸಿಕೊಂಡ ಕೆಲವು ಭಾರತೀಯರು, ದಲಿತರು ಅನಾಗರೀಕರು ಅಸುಸಂಸ್ಕೃತರು; ಅವರು ನೀರು, ವಿದ್ಯುಚ್ಛಕ್ತಿ, ಮನೆ, ಆಸ್ತಿಗಳನ್ನು ಹೊಂದಲು ಅನರ್ಹರೆಂದೇ ತಿಳಿದುಕೊಂಡಿದ್ದಾರೆ. ಒಂದು ವೇಳೆ ಸರಕಾರದ ಯೋಜನೆಗನುಗುಣವಾಗಿ ಈ ಎಲ್ಲಾ ಸೌಕರ್ಯಗಳನ್ನು ಅವರಿಗೆ ನೀಡಿದರೂ ಉಳಿದ ಸಮುದಾಯಗಳು ವಾಸಿಸುವ ಜಾಗದಲ್ಲಿ ಹಾಕಿದ ಬೀದಿದೀಪ, ರಸ್ತೆ ಸಂಪರ್ಕ, ನೀರಿನ ವ್ಯವಸ್ಥೆಗಳಿಗಿಂತ ತಳಮಟ್ಟದ ಗುಣಮಟ್ಟವನ್ನು ಇದು ಹೊಂದಿರುವುದನ್ನು ನಾವು ಕಾಣಬಹುದು. ಸ್ವಚ್ಛತೆಯ ಬಗ್ಗೆ ಪರಿಪೂರ್ಣ ಜ್ಞಾನವಿಲ್ಲದ ಈ ವರ್ಗವನ್ನು ಆರೋಗ್ಯಕರ ಜೀವನ ನಡೆಸಲು ಇಂದು ಯಾರೂ ಪ್ರೋತ್ಸಾಹಕರಾಗಿಲ್ಲ ಎಂಬುದು ವಿಷಾದದ ಸಂಗತಿ. ಬದಲಾಗಿ ಅವರನ್ನು ಮಲಹೊರುವ ಅನಿಷ್ಟ ಪದ್ಧತಿಗೆ ದೂಡುತ್ತಾರೆ. ಒಂದು ಮಾಹಿತಿಯ ಪ್ರಕಾರ ನಮ್ಮ ರಾಜ್ಯದಲ್ಲಿ ಈಗ ಸುಮಾರು ೫೩೦ ಮಂದಿ ಈ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ರಾಯಚೂರು (೨೩೮) ಹಾಗೂ ಬೆಂಗಳೂರು ಗ್ರಾಮಾಂತರ (೪೮) ಜಿಲ್ಲೆಗಳು ಮುಂಚೂಣಿಯಲ್ಲಿವೆ. ಉಳಿದಂತೆ ಬೆಂಗಳೂರು ನಗರ

(೪೪), ದಾವಣಗೆರೆ (೨೭), ಮಂಡ್ಯ (೧೨) ಜಿಲ್ಲೆಗಳೂ ಈ ಪಟ್ಟಿಯಲ್ಲಿ ಸೇರಿವೆ. ಇದು ಕರ್ನಾಟಕ ಸರಕಾರದ ಸಮಾಜ ಕಲ್ಯಾಣ ಇಲಾಖೆ ಫೆಬ್ರವರಿ ೧೨, ೨೦೦೮ರಂದು ಬಿಡುಗಡೆಗೊಳಿಸಿದ ವರದಿಯಲ್ಲಿನ ಆಘಾತಕಾರಿ ಅಂಶ. ಆದುದರಿಂದ ಅಸ್ಪೃಶ್ಯ ಮನೋಭಾವನೆ ಹಾಗೂ ದಲಿತರ ಮೂಲಭೂತ ಸೌಕರ್ಯಗಳ ಬಗೆಗಿನ ನಿರಾಸಕ್ತಿ ಧೋರಣೆಗಳು ಇಂದು ಹಳ್ಳಿ ಯಾ ಪಟ್ಟಣವೆಂಬ ಬೇಧವಿಲ್ಲದೆ ಈ ಸಮುದಾಯವನ್ನು ಕಾಡುತ್ತಿದೆ.

**ಜೀವನ ಶೈಲಿ:**

ನಮ್ಮ ದೇಶದಲ್ಲಿ ದಲಿತ ಸಂಬಂಧೀ ವಿಷಯಗಳ ಬಗ್ಗೆ ಹಲವಾರು ಸಾಂವಿಧಾನಿಕ ತೀರ್ಪುಗಳು ಹೊರಬಂದಿವೆ. ಅಸ್ಪೃಶ್ಯತಾಚರಣೆಯು ಮಾನಸಿಕವಾಗಿ ಓರ್ವ ವ್ಯಕ್ತಿಯು ಮೇಲೆ ಗಹನವಾದ ಪರಿಣಾಮ ಬೀರುತ್ತದೆ ಎಂಬುದು ಈ ತೀರ್ಪುಗಳ ಒಟ್ಟು ಸಾರಾಂಶ. ಇದು ನಿಧಾನವಾಗಿ ಆತ ಯಾ ಆಕೆಯ ಜೀವನದ ಎಲ್ಲಾ ಸ್ತರಗಳ ಮೇಲೆ ಗಂಭೀರವಾದ ಪರಿಣಾಮವನ್ನು ಬೀರುತ್ತದೆ. ಆದುದರಿಂದ ವರ್ಣವ್ಯವಸ್ಥೆ ಸಮಾಜದ ಆಂತರಿಕ ಭಾಗದಲ್ಲಿದ್ದರೂ, ಅದು ದಲಿತರ ಒಟ್ಟು ಕಾರ್ಯ ಚಟುವಟಿಕೆಯ ಮೇಲೆ ತೀವ್ರ ಪರಿಣಾಮವನ್ನು ಬೀರುತ್ತದೆ. ಒಂದೆಡೆ ಕೆಳಮಟ್ಟದ ಕೆಲಸವನ್ನು ಮಾಡಲು ದಲಿತರೇ ಅರ್ಹರೆಂದು ಮೇಲ್ವರ್ಗದವರು ಭಾವಿಸಿದರೆ, ಇನ್ನೊಂದೆಡೆ ದಲಿತರು ಹೇಗೋ ಸುಧಾರಿಸಿಕೊಂಡು ಇಂತಹ ಕೆಲಸಗಳನ್ನು ಒಪ್ಪಿಕೊಳ್ಳುತ್ತಾರೆ. ಇಲ್ಲಿ ಆದಾಯ ಬಹಳ ಕಡಿಮೆ. ಜೊತೆಗೆ ಶಾರೀರಿಕವಾದ ಹಲವಾರು ಸಮಸ್ಯೆಗಳನ್ನು ಅನುಭವಿಸಲೇಬೇಕಾಗುತ್ತದೆ. ಬದಲಾಗಿ ದಲಿತರನ್ನು ನೈಪುಣ್ಯಯುತ ಕೈಗಾರಿಕಾ ವಲಯಗಳಲ್ಲಿ, ಇನ್ನಿತರ ಸೇವಾ ವಲಯಗಳಲ್ಲಿ ತೊಡಗಿಸಿಕೊಳ್ಳಲು ಯಾವ ಸಂಘಟನೆಗಳೂ ಪ್ರೇರೇಪಿಸುವಂತೆ ಇಂದು ಕಾಣುತ್ತಿಲ್ಲ. ಆದುದರಿಂದ ಪರಿಣಿತಿ ಕೆಲಸಗಳಲ್ಲಿ ದಲಿತ ಯುವಕ ಯುವತಿಯರನ್ನು ಇಂದು ತೊಡಗಿಸಿಕೊಳ್ಳಬೇಕಾದ ಅವಕಾಶವನ್ನು ಅವರಿಗೆ ಕಲ್ಪಿಸಿಕೊಡಬೇಕಾಗಿದೆ. ೧೯೯೭ರಲ್ಲಿ ಯೂನಿಸೆಫ್  ತನ್ನ ವರದಿಯಲ್ಲಿ ಭಾರತದಲ್ಲಿ ಇರತಕ್ಕಂತಹ ಹೆಚ್ಚಿನ ಎಲ್ಲಾ ಬಾಲ ಜೀತದಾಳುಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಿಂದ ಬಂದವರಾಗಿದ್ದಾರೆ ಎಂದು ಉಲ್ಲೇಖಿಸುತ್ತದೆ. ಅದರಲ್ಲೂ ಹೆಚ್ಚಿನ ಭಾಗ ದಲಿತ ಬಾಲಕಿಯರಾಗಿದ್ದಾರೆ ಎಂಬ ಭಯಾನಕ ಅಂಶ ಹೊರಹಾಕಿದೆ. ಇವರು ಕನಿಷ್ಟ ಕೂಲಿ ಹಾಗೂ ಇನ್ನಿತರ ಮೂಲ ಸೌಲಭ್ಯಗಳಿಂದ ವಂಚಿತರಾದವರು. ಬಡತನ, ಹಸಿವೆ, ಕಷ್ಟಕರ ಜೀವನ ಪದ್ಧತಿಗಳೇ ಇಂದು ಕೆಲವೆಡೆ ದಲಿತ ಮಹಿಳೆಯರನ್ನು ಲೈಂಗಿಕ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಪ್ರೇರೆಪಿಸುತ್ತಿದೆ. ಆದುದರಿಂದ ಇವರ ಜೀವನ ಜೀವನಮಟ್ಟವನ್ನು ಸುಧಾರಿಸಲು ನಮ್ಮಲಿರತಕ್ಕಂತಹ ಸಂಪನ್ಮೂಲಗಳ ಪಾರದರ್ಶಕ ವಿತರಣೆ ಹಾಗೂ ಬಳಕೆಯಾಗಬೇಕಿದೆ. ಇನ್ನು ದಲಿತ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳ ಬಗ್ಗೆ ವಿಶ್ಲೇಷಿಸಿದಾಗ ಅವರ ಸ್ಥಿತಿ ಇನ್ನೂ ಶೋಚನೀಯ ಸ್ಥಿತಿಯಲ್ಲಿದೆಂದು ತಿಳಿಯಬಹುದು.(ಶೌರೀಶ್ ಕುದ್ಕಳಿ)

**೨.೪ ಅಸ್ಪೃಶ್ಯತೆ, ದೌರ್ಜನ್ಯಗಳ ವಿರುದ್ಧ ಕಾನೂನು:**

ಸಮಾಜದಲ್ಲಿ ಬದಲಾವಣೆಗಳು ಆಗುತ್ತಿದ್ದರೂ ಅಸ್ಪೃಶ್ಯತೆ ಹಾಗೂ ದಲಿತರ ಮೇಲಿನ ದೌರ್ಜನ್ಯಗಳು ಇನ್ನೂ ಸಮಾಜದಲ್ಲಿ ಜೀವಂತವಾಗಿದೆ. . ಈ ನಿಟ್ಟಿನಲ್ಲಿ ಅಸ್ಪೃಶ್ಯತೆ, ದೌರ್ಜನ್ಯಗಳ ವಿರುದ್ಧ ಕಾನೂನುಗಳ ಬಗ್ಗೆ ತಿಳಿದುಕೊಳ್ಳೋಣ.

**ಪುನರಪಿ ಅಪರಾಧಕ್ಕೆ ಹೆಚ್ಚಿನ ಶಿಕ್ಷೆ:**

ಈ ಕಾನೂನಿನಡಿಯಲ್ಲಿ ಅಪರಾಧವೆಸಗಿ, ಶಿಕ್ಷೆಗೊಳಗಾದವನು ಪುನರಪಿ ಈ ಕಾನೂನಿನಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನೆಸಿಗಿದಲ್ಲಿ ಪುನಃ ಎಸಗಿದ ಎರಡನೇ ಅಪರಾಧಕ್ಕಾಗಿ ಆರು ತಿಂಗಳುಗಳಿಗೆ ಕಡಿಮೆ ಇಲ್ಲದ ಮತ್ತು ಮೂರನೇ ಅಪರಾಧಕ್ಕೆ ಒಂದು ವರ್ಷಕ್ಕೆ ಕಡಿಮೆಯಿಲ್ಲದ ಕಾರಾಗೃಹ ವಾಸದ ಹಾಗೂ ದಂಡದ ಹೆಚ್ಚಿನ ಪ್ರಮಾಣದ ಶಿಕ್ಷೆ(ಕಲಂ ೧೧)

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಅಧಿನಿಯಮ ೧೯೮೯ ರ ಮುಖ್ಯಾಂಶಗಳು.

ಪ.ಜಾ ಅಥವಾ ಪ.ಪಂ ಕ್ಕೆ ಸೇರಿರದ ಯಾವುದೇ ವ್ಯಕ್ತಿಯು ಪ.ಜಾ ಅಥವಾ ಪ.ಪಂ ಕ್ಕೆ ಸೇರಿದ ವ್ಯಕ್ತಿಯನ್ನು –

- ತಿನ್ನಬಾರದ, ಕುಡಿಯಬಾರದ ಅಥವಾ ಅಸಹ್ಯಕರವಾದ ಯಾವುದೇ ಪಧಾರ್ಥವನ್ನು ತಿನ್ನುವಂತೆ ಅಥವಾ ಕುಡಿಯುವಂತೆ ಒತ್ತಾಯಿಸುವುದು.
- ಆತನನ್ನು ಅವಮಾನಪಡಿಸುವ ಅಥವಾ ಪೀಡಿಸುವ ಉದ್ದೇಶ ಹೊಂದಿ ಆತನ ಜಾಗದಲ್ಲಿ ಅಥವಾ ಅದರ ನೆಲದಲ್ಲಿ ಮಲ, ಹೊಲಸು, ಪಶುವಿನ ಶವ ಮುಂತಾದ ಯಾವುದೇ ಅಸಹ್ಯಕರವಾದ ಪದಾರ್ಥವನ್ನು ಎಸೆಯುವುದು.
- ಆತನ ಅರಿವೆಗಳನ್ನು ಒತ್ತಾಯದಿಂದ ಕಳಚುವುದು, ಆತನನ್ನು ಬೆತ್ತಲೆ ಮೆರವಣೆಗೆ ಮಾಡುವುದು; ಆತನ ಮುಖಕ್ಕೆ ಅಥವಾ ದೇಹದ ಯಾವುದೇ ಭಾಗಕ್ಕೆ ಬಣ್ಣ ಹಚ್ಚುವುದು ಅಥವಾ ಮಾನವ ಘನತೆಗೆ ಅಗೌರವನ್ನು ಉಂಟುಮಾಡುವ ಬೇರಾವುದೇ ಕೃತ್ಯವನ್ನು ಎಸಗುವುದು.
- ಆತನ ಜಮೀನನ್ನು ಅಕ್ರಮವಾಗಿ ತನ್ನ ಪರವಾಗಿ ವರ್ಗಾಯಿಸಿಕೊಳ್ಳುವುದು ಅಥವಾ ಸ್ವಾಧೀನ ಪಡಿಸಿಕೊಳ್ಳುವುದು.
- ಆತನ ಜಮೀನು ಅಥವಾ ನಿವೇಶನದಿಂದ ಆತನನ್ನು ಸ್ಥಳಾಂತರಿಸುವುದು, ಅಥವಾ ಆತನು ಅದನ್ನು ಅನುಭೋಗಿಸುವಲ್ಲಿ ತಡೆಯೊಡ್ಡುವುದು.
- ಚುನಾವಣೆಯಲ್ಲಿ ಆತನು ತನಗಿಷ್ಟವಾದ ಅಭ್ಯರ್ಥಿಗೆ ಮತ ಚಲಾಯಿಸುವುದನ್ನು ತಡೆಯುವುದು ಅಥಾವಾ ಕಾನೂನುಗೆ ವಿರೋಧವಾದ ರೀತಿಯಲ್ಲಿ ಮತ ಚಲಾಯಿಸಬೇಕೆಂದು ಆತನನ್ನು ಒತ್ತಾಯಿಸುವುದು.

- ಆತನ ವಿರುದ್ಧ ಸುಳ್ಳು ದ್ವೇಷಪೂರಿತ ಅಥವಾ ಕಿರುಕುಳಕಾರಿ ದಾವೆ ಅಥವಾ ಅಪರಾಧಿಕ ವ್ಯವಹರಣೆಯನ್ನು ಹೂಡುವುದು.
- ಆತನನ್ನು ಉದ್ದೇಶಪೂರ್ವಕವಾಗಿ ಅವಮಾನಿಸುವುದು.
- ಆತನು ತನ್ನ ಮನೆಯನ್ನು ಅಥವಾ ಗ್ರಾಮವನ್ನು ಅಥವಾ ಯಾವುದೇ ವಾಸ ಸ್ಥಳವನ್ನು ಬಿಟ್ಟು ಹೋಗುವಂತೆ ಆತನ ಮೇಲೆ ಒತ್ತಡ ತರುವುದು.
- ಪ.ಜಾ ಅಥವಾ ಪ.ಪಂ ಕ್ಕೆ ಸೇರಿದ ಮಹಿಳೆಯ ಸ್ತ್ರೀತ್ವವನ್ನು ಅಗೌರವಿಸುವ ಉದ್ದೇಶ ಹೊಂದಿ ಆಕೆಯ ಮೇಲೆ ಆಕ್ರಮಣ ಮಾಡುವುದು; ಬಲಪ್ರಯೋಗ ಮಾಡುವುದು; ಅಥವಾ ಆಕೆಯನ್ನು ಲೈಂಗಿಕವಾಗಿ ಶೋಷಿಸುವುದು.

  ಮುಂತಾದ ಕೃತ್ಯಗಳು ಶಿಕ್ಷಾರ್ಹ ಅಪರಾಧಗಳಾಗಿದ್ದು, ಈ ಅಪರಾಧಗಳಿಗೆ ಆರು ತಿಂಗಳಿಗೆ ಕಡಿಮೆಯಿಲ್ಲದ, ಆದರೆ ೫ ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾಗೃಹವಾಸದ ಮತ್ತು ದಂಡದ ಶಿಕ್ಷೆಯಿದೆ.(ಕಲಂ ೩-೧)

  ಅಲ್ಲದೆ ಪ.ಜಾ ಅಥವಾ ಪ.ಪಂ ಕ್ಕೆ ಸೇರಿರದ ಯಾವುದೇ ವ್ಯಕ್ತಿಯು

- ಪ.ಜಾ ಅಥವಾ ಪ.ಪಂ ಕ್ಕೆ ಸೇರಿದ ಯಾವುದೇ ವ್ಯಕ್ತಿಯ ವಿರುದ್ಧ ಆತನಿಗೆ ಶಿಕ್ಷೆಯಾಗಬೇಕೆನ್ನುವ ಉದ್ದೇಶ ಹೊಂದಿ ಅಥವಾ ಆತನಿಗೆ ಶಿಕ್ಷೆಯಾಗುವುದೆನ್ನುವ ತಿಳುವಳಿಕೆ ಹೊಂದಿ, ಸುಳ್ಳು ಸಾಕ್ಷವನ್ನು ನುಡಿಯುವುದು, ಸೃಷ್ಟಿಸುವುದು;
- ಪ.ಜಾ ಅಥವಾ ಪ.ಪಂಕ್ಕೆ ಸೇರಿದ ವ್ಯಕ್ತಿಯನ್ನು ಯಾವುದೇ ಸ್ವತ್ತಿಗೆ ಅಥವಾ ಆತನ ವಾಸಸ್ಥಳಕ್ಕೆ ಅಥವಾ ಆತನ ಪೂಜಾ ಸ್ಥಳಕ್ಕೆ ಹಾನಿಯನ್ನುಂಟುಮಾಡುವುದು ಅಥವಾ ಅಂತಹ ಸ್ಥಳವನ್ನು ಅಥವಾ ಸ್ವತ್ತನ್ನು ನಾಶಗೊಳಿಸುವುದು.
- ಪ.ಜಾ ಮತ್ತು ಪ.ಪಂ ಕ್ಕೆ ಸೇರಿದ ವ್ಯಕ್ತಿಯ ಅಥವಾ ಆತನ ಸ್ವತ್ತಿನ ವಿರುದ್ಧ ಆತನು ಆ ಜಾತಿ ಅಥವಾ ಪಂಗಡ ಸೇರಿದವನಾಗಿರುತ್ತಾನೆ ಎನ್ನುವ ಕಾರಣ ಮಾತ್ರದಿಂದ ಭಾರತೀಯ ದಂಡ ಸಂಹಿತೆಯಡಿಯಲ್ಲಿ ಶಿಕ್ಷಾರ್ಹವಾದ ಯಾವುದೇ ಕೃತ್ಯವನ್ನು ಎಸಗುವುದು ಮತ್ತು ಅಂಥ ಅಪರಾಧದ ಪುರಾವೆಯನ್ನು ನಾಶಗೊಳಿಸುವುದು.

  ಮುಂತಾದವುಗಳೆಲ್ಲ ಶಿಕ್ಷಾರ್ಹ ಕೃತ್ಯಗಳಾಗಿದ್ದು, ಆಯಾ ಕೃತ್ಯದ ತೀವ್ರತೆಗನುಗುಣವಾಗಿ ಕನಿಷ್ಟ ೬ ತಿಂಗಳಿಗೆ ಕಡಿಮೆಯಿಲ್ಲದ, ಆದರೆ ಜೀವಾವಧಿಗೆ ವಿಸ್ತರಿಸಬಹುದಾದ ಮತ್ತು ದಂಡದ ಶಿಕ್ಷೆ ಇದೆ. ಅಲ್ಲದೆ, ಪ.ಜಾ ಅಥವಾ ಪ.ಪಂ ಕ್ಕೆ ಸೇರದ ಯಾವುದೇ ವ್ಯಕ್ತಿ ದುರುದ್ದೇಶದಿಂದ ಸುಳ್ಳು

ಸಾಕ್ಷಾಧಾರಗಳನ್ನು ಸೃಷ್ಟಿಸಿ ಆ ಮೂಲಕ ಪ.ಜಾ ಅಥವಾ ಪ.ಪಂ ಕ್ಕೆ ಸೇರಿದ ವ್ಯಕ್ತಿ ನ್ಯಾಯಾಲಯದಿಂದ ಶಿಕ್ಷೆಗೆ ಒಳಗಾಗುವಂತೆ ಮಾಡಿದಲ್ಲಿ ಸುಳ್ಳು ಸಾಕ್ಷಾಧಾರ ಸೃಷ್ಟಿಸಿದ ಅಂತಹ ವ್ಯಕ್ತಿಗೆ ಮರಣ ದಂಡನೆಯ ಶಿಕ್ಷೆಯೂ ಇದೆ(ಕಲಂ ೩-೨)

- ಮೇಲಿನ ಯಾವುದೇ ಕೃತ್ಯವನ್ನು ಎಸಗಿದ ವ್ಯಕ್ತಿ, ಕೃತ್ಯಕ್ಕೊಳಗಾದ ವ್ಯಕ್ತಿಯು ಪ.ಜಾ ಮತ್ತು ಪ.ಪಂ ಕ್ಕೆ ಸೇರಿದವನೆಂದು ಗೊತ್ತಿದ್ದೂ ಆತನನ್ನು ಅವಮಾನಿಸುವ ಉದ್ದೇಶ ಹೊಂದಿ ಆ ಕೃತ್ಯವನ್ನೆಸಗಿರಬೇಕು.
- ಮೇಲಿನ ಯಾವುದೇ ಅಪರಾಧವನ್ನು ಎಸಗಿದ ವ್ಯಕ್ತಿ ಸಾರ್ವಜನಿಕ ಸೇವಕನಾಗಿದ್ದಲ್ಲಿ ಆತನಿಗೆ ವಿಧಿಸುವ ಶಿಕ್ಷೆಯ ಪ್ರಮಾಣ ಹೆಚ್ಚಿನದ್ದಾಗಿರುತ್ತದೆ.

**ಪುನರಪಿ ಅಪರಾಧಕ್ಕೆ ಹೆಚ್ಚಿನ ಶಿಕ್ಷೆ:** ಮೇಲಿನ ಯಾವುದೇ ಅಪರಾಧವನ್ನು ಎಸಗಿ ಶಿಕ್ಷೆಗೊಳಗಾದ ವ್ಯಕ್ತಿಯು ಪುನರಪಿ ಅಂತಹ ಯಾವುದೇ ಅಪರಾದವನ್ನೆಸಿಗಿದಲ್ಲಿ ಪನಃ ಎಸಗಿದ ಅಪರಾಧಕ್ಕಾಗಿ ಆತನಿಗೆ ಒಂದು ವರ್ಷಕ್ಕೆ ಕಡಿಮೆಯಿಲ್ಲದ, ಆದರೆ ಆ ಅಪರಾಧಕ್ಕೆ ಇರುವ ಗರಿಷ್ಟ ಪ್ರಮಾಣದವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಪ್ರಮಾಣದ ಶಿಕ್ಷೆ ಇದೆ( ಕಲಂ ೫)

**ಕರ್ತ್ಯವ್ಯ ನಿರ್ಲಕ್ಷಿಸಿದ ಸಾರ್ವಜನಿಕನಿಗೆ ಶಿಕ್ಷೆ:** ಪ.ಜಾ ಅಥವಾ ಪ.ಪಂ ಕ್ಕೆ ಸೇರಿಲ್ಲದ ಸಾರ್ವಜನಿಕ ಸೇವಕನು ಈ ಅಧಿನಿಯಮದಡಿಯಲ್ಲಿ ಪಾಲಿಸಬೇಕಾದ ಕರ್ತವ್ಯಗಳನ್ನು ಪಾಲಿಸುವಲ್ಲಿ ನಿರ್ಲಕ್ಷ ತೋರಿದರೆ ಆತನು ಆರು ತಿಂಗಳಿಗೆ ಕಡಿಮೆಯಿಲ್ಲದ, ಆದರೆ ಒಂದು ವರ್ಷದ ಅವಧಿಗೆ ವಿಸ್ತರಿಸಬಹುದಾದ ಕಾರಾಗೃಹವಾಸದ ಶಿಕ್ಷೆಗೆ ಗುರಿಯಾಗುತ್ತಾನೆ.(ಕಲಂ ೪)

**ಅಪರಾಧಿಯ ಆಸ್ತಿಯ ಮುಟ್ಟುಗೋಲು:**ಮೇಲಿನ ಯಾವುದೇ ಅಪರಾಧವನ್ನೆಸಗುವಲ್ಲಿ ಅಪರಾಧಿಯು ಉಪಯೋಗಿಸಿದ ಆತನ ಸ್ಥಿರ ಅಥವಾ ಚರ ಆಸ್ತಿಯನ್ನು ; ಅಥವಾ ಅಪರಾಧಿಗೆ ವಿಧಿಸಿದ ದಂಡದ ಹಣವನ್ನು ವಸೂಲಿ ಮಾಡಿಕೊಳ್ಳುವುದಕ್ಕಾಗಿ ಆತನ ಬೇರಾವುದೇ ಆಸ್ತಿಯನ್ನು; ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ವಿಶೇಷ ನ್ಯಾಯಾಲಯವು ಆದೇಶಿಸಬಹುದಾಗಿದೆ.(ಕಲಂ ೭)

**ಪೂರ್ವಭಾವನೆ :** ಈ ಅಧಿನಿಯಮದಡಿಯಲ್ಲಿ ಅಪರಾಧದ ಸಂಬಂಧ ಜರಗಿದ ವಿಚಾರಣೆಯಲ್ಲಿ ಆರೋಪಿಸಲಾದ ಅಪರಾಧವನ್ನೆಸಗುವಲ್ಲಿ ಆರೋಪಿಗೆ ಯಾವುದೇ ವ್ಯಕ್ತಿ ಹಣಕಾಸಿನ ಸಹಾಯ ನೀಡಿದ್ದಾಗಿ ರುಜುವಾತಾದಲ್ಲಿ ಆರೋಪಿಯು ಆ ಅಪರಾಧವನ್ನೆಸಗುವಲ್ಲಿ ಆ ವ್ಯಕ್ತಿಯು ದುಷ್ಪ್ರೇರಣೆ ನೀಡಿದ್ದಾಗಿ ನ್ಯಾಯಾಲಯ ಪೂರ್ವ ಭಾವನೆ ಹೊಂದತಕ್ಕದ್ದು(ಕಲಂ ೮)

**ನಿರೀಕ್ಷಣಾ ಜಾಮೀನಿಗೆ ಅವಕಾಶವಿಲ್ಲ**

ಈ ಅಧಿನಿಯಮದಡಿಯಲ್ಲಿ ಅಪರಾಧ ಎಸಗಿದ್ದಾಗಿ ಆರೋಪಿ ಅಪರಾಧಿಕ ಪ್ರಕ್ರಿಯಾ ಸಂಹಿತೆಯಡಿಯಲ್ಲಿ ನಿರೀಕ್ಷಣಾ ಜಾಮೀನನ್ನು ಪಡೆಯಲು ಅವಕಾಶವಿಲ್ಲ. ಆದರೆ ದಸ್ತಗಿರಿಯಾದ ನ್ಯಾಯಾಲಯದ ಮುಂದೆ ಹಾಜರು ಪಡಿಸಿದಾಗ ಆತ ವಿಶೇಷ ನ್ಯಾಯಾಲಯದಿಂದ ಜಾಮೀನಿನ ಮೇಲೆ ಬಿಡುಗಡೆಗೊಳ್ಳಬಹುದು.

**ವಿಚಾರಣೆ ವಿಶೇಷ ನ್ಯಾಯಾಲಯದಲ್ಲಿ**

ಈ ಅಧಿನಿಯಮದಡಿಯಲ್ಲಿ ಅಪರಾಧಿಗಳಿಗಾಗಿ ಆರೋಪಿತರ ವಿಚಾರಣೆಯನ್ನು ವಿಶೇಷ ನ್ಯಾಯಾಲಯದಲ್ಲಿ ನಡೆಸಲಾಗುತ್ತದೆ. ರಾಜ್ಯ ಸರಕಾರದ ಪ್ರತಿ ಜಿಲ್ಲೆಗೆ ಒಂದು ಸೆಶನ್ಸ್ ನ್ಯಾಯಾಲಯವನ್ನು ವಿಶೇಷ ನ್ಯಾಯಾಲಯವೆಂದು ನಿರ್ದಿಷ್ಟಗೊಳಿಸಿದೆ (ಕಲಂ ೧೪).

**ಉಲ್ಲೇಖಗಳು:**


- ಪಿ.ಕಮಲಾಕ್ಷ , ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ , ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪,
- ಡಾ। ಟಿ.ಆರ್.ಚಂದ್ರಶೇಖರ್,ಕರ್ನಾಟಕದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಗಣತಿ ವಿವರಗಳು, ಅಭಿವೃದ್ಧಿ ಅಧ್ಯಯನ, ಸಂಪುಟ ೩, ಸಂಚಿಕೆ ೩,೨೦೦೫
- ಶೌರೀಶ್ ಕುದ್ಕಳ್ಳಿ, ಶೋಷಿತ ತಳಹದಿಯಲ್ಲಿ ದಲಿತ ಸಮುದಾಯ, ಜನಪರ ವೇದಿಕೆ,ಎಪ್ರಿಲ್ ೩, ೨೦೦೯
- ಬಿ.ಯು.ಸುಮಾ, ದಲಿತ ಮಹಿಳೆ ಬದಲಾಗುತ್ತಿರುವ ರೂಪಕ, ಪ್ರಜಾವಾಣಿ ಪತ್ರಿಕೆ, ಎಪ್ರಿಲ್ ೧೭, ೨೦೧೨
- ಡಾ।ಟಿ.ಆರ್.ಚಂದ್ರಶೇಖರ್, ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಭಿವೃದ್ಧಿ,(ಜಾಲತಾಣ:ಕಣಜ.ಇನ್, ವರ್ತಮಾನ.ಕಾಮ್)
- ಜನಗಣತಿ ವರದಿ–೨೦೦೧

ನಕ್ಷೆ ೩.೧.೧ ಉಡುಪಿ ಜಿಲ್ಲೆಯ ನಕ್ಷೆ



# ಅಧ್ಯಾಯ ೩.

# ಉಡುಪಿ ಜಿಲ್ಲೆಯ ಮುಂಡಾಲ ಸಮುದಾಯದ ಕ್ಷೇತ್ರ ಕಾರ್ಯಾಧಾರಿತ ಅಧ್ಯಯನ

## ೩.೧ ಉಡುಪಿ ಜಿಲ್ಲೆಯ ಸಂಕ್ಷಿಪ್ತ ಪರಿಚಯ

ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯವನ್ನು ಉಡುಪಿ ತಾಲೂಕಿನಲ್ಲಿ ನಡೆಸಲಾಗಿದ್ದು, ಈ ನಿಟ್ಟಿನಲ್ಲಿ ಉಡುಪಿ ಜಿಲ್ಲೆಯ ಒಂದು ಕಿರುಪರಿಚಯವನ್ನು ಕೊಡುವುದು ಅವಶ್ಯಕವಾಗಿರುತ್ತದೆ. ಉಡುಪಿ ಜಿಲ್ಲೆಯು ಕರಾವಳಿ ಕರ್ನಾಟಕದ ಜಿಲ್ಲೆಯಾಗಿದೆ. ೧೯೯೭ ಆಗಸ್ಟ್ ೨೪ ರಂದು ದಕ್ಷಿಣ ಕನ್ನಡ ಜಿಲ್ಲೆಯಿಂದ ವಿಭಜನೆಗೊಂಡು ಹೊಸ ಜಿಲ್ಲೆಯಾಗಿ ಪರಿವರ್ತನೆಗೊಂಡಿತು. ಪ್ರಸ್ತುತ ಜಿಲ್ಲೆಯು ಉಡುಪಿ, ಕುಂದಾಪುರ ಹಾಗೂ ಕಾರ್ಕಳ ತಾಲೂಕುಗಳನ್ನು ಒಳಗೊಂಡಿದೆ. ಚಾರಿತ್ರಿಕವಾಗಿ ಈ ಪ್ರದೇಶವು ವಿಜಯನಗರ ರಾಜವಂಶಕ್ಕೂ ಹಾಗೂ ಬ್ರಿಟೀಷರ ಆಳ್ವಿಕೆಯಲ್ಲಿ ಮದ್ರಾಸ್ ಸರಕಾರದ ಆಡಳಿತಕ್ಕೆ ಒಳಪಟ್ಟಿತ್ತು. ದಕ್ಷಿಣ ಕನ್ನಡ ಜಿಲ್ಲೆಯಂತೆಯೇ ಉಡುಪಿ ಜಿಲ್ಲೆಯನ್ನು 'ತುಳುನಾಡು' ಎಂದು ಕರೆಯಲಾಗುತ್ತಿತ್ತು.

### ಭೌಗೋಳಿಕ ಅಂಶಗಳು

ಉಡುಪಿ ಜಿಲ್ಲೆಯು ಕರಾವಳಿ ಕರ್ನಾಟಕದ ಜಿಲ್ಲೆಯಾಗಿದ್ದು, ಉತ್ತರದಲ್ಲಿ ಉತ್ತರಕನ್ನಡ ಜಿಲ್ಲೆ ಹಾಗೂ ದಕ್ಷಿಣದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿದೆ . ಪೂರ್ವಕ್ಕೆ ಪಶ್ಚಿಮ ಘಟ್ಟದ ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿದ್ದು, ಪಶ್ಚಿಮಕ್ಕೆ ಅರಬ್ಬೀ ಸಮುದ್ರವಿದೆ. ಒಟ್ಟು ೩೫೭೫ ಚದರ ಕಿ.ಮೀ ವಿಸ್ತೀರ್ಣದ ಭೌಗೋಳಿಕ ಪ್ರದೇಶವನ್ನು ಹೊಂದಿರುವ ಈ ಜಿಲ್ಲೆಯು ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದ ಶೇಕಡ ೨.೦೮ ಭಾಗವನ್ನು ಹೊಂದಿದೆ. ಜಿಲ್ಲೆಯು ಮೂರು ವಿಧವಾದ ಭೌಗೋಳಿಕ ಲಕ್ಷಣಗಳನ್ನು ಒಳಗೊಂಡಿದೆ. ಕುಂದಾಪುರ ಹಾಗೂ ಉಡುಪಿ ತಾಲೂಕುಗಳು ಒಟ್ಟು ೯೮ ಕಿ.ಮೀ ಉದ್ದದ ಕರಾವಳಿ ತೀರವನ್ನು ಹೊಂದಿದೆ. ಮಧ್ಯದಲ್ಲಿ ಬಯಲು ಭೂಮಿಯನ್ನು ಹೊಂದಿದ್ದು, ಕುಂದಾಪುರ ಹಾಗೂ ಕಾರ್ಕಳ ತಾಲೂಕುಗಳು ಬಯಲು ಸೀಮೆ ಹಾಗೂ ಮಲೆನಾಡು ಪ್ರದೇಶವನ್ನು ಒಳಗೊಂಡಿದೆ. ಶೇಕಡಾ ೨೬ ರಷ್ಟು ಮಲೆನಾಡು ಪ್ರದೇಶವನ್ನು ಒಳಗೊಂಡಿದ್ದು ಅನೇಕ ನದಿಗಳ ಉಗಮ ಸ್ಥಾನ ಇದಾಗಿದೆ, ಮುಖ್ಯವಾಗಿ ಸೀತಾನದಿ, ಸ್ವರ್ಣನದಿ, ಶಾಂಭವಿ, ಚಕ್ರ ಹಾಗೂ ವರಾಹಿ. ಜಿಲ್ಲೆಯ ಮುಖ್ಯವಾದ ಬೆಳೆಗಳು ಭತ್ತ, ಕಬ್ಬು, ಶೇಂಗಾ, ತೆಂಗು, ಅಡಿಕೆ ಹಾಗೂ ಗೇರು.

### ಜನಸಂಖ್ಯಾ ವಿವರ

೨೦೦೧ನೇ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧.೧೨ ಲಕ್ಷಗಳು, ಅದರಲ್ಲಿ ೫.೨೨ ಲಕ್ಷ ಪುರುಷರು ಹಾಗೂ ೫.೯೦ ಲಕ್ಷ ಮಹಿಳೆಯರಿದ್ದಾರೆ. ಪುರುಷ ಮತ್ತು ಮಹಿಳೆಯರ ಲಿಂಗಾನುಪಾತ ೧೦೦೦:೧೧೩೦ ಇದು ರಾಜ್ಯದಲ್ಲೇ ಹೆಚ್ಚಿನ ಮಟ್ಟದಲ್ಲಿದೆ. ಹೆಚ್ಚಿನ ಸಂಖ್ಯೆಯಲ್ಲಿ ಜನರು ಗ್ರಾಮೀಣ ಪ್ರದೇಶದಲ್ಲಿ

ವಾಸಮಾಡುತ್ತಾರೆ. ಒಟ್ಟು ಜನಸಂಖ್ಯೆಯಲ್ಲಿ ೯.೦೬ ಲಕ್ಷ(೮೨%) ಜನರು ಗ್ರಾಮೀಣ ಭಾಗದಲ್ಲಿ ವಾಸವಾಗಿದ್ದು, ೨.೦೬ ಲಕ್ಷ(೧೮%) ಜನರು ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ೨೦೦೧ ರ ಅಧ್ಯಯನದ ಪ್ರಕಾರ ಅತ್ಯಂತ ಕಡಿಮೆ ಮಟ್ಟದ (೭.೧೪%) ಜನಸಂಖ್ಯಾ ಏರಿಕೆ ಈ ಜಿಲ್ಲೆಯಲ್ಲಿದೆ. ತಾಲೂಕುವಾರು ಗಮನಿಸಿದಾಗ ಉಡುಪಿ ತಾಲೂಕಿನಲ್ಲಿ ಅತ್ಯಂತ ಹೆಚ್ಚಿನ ೫.೨೯ ಲಕ್ಷದಷ್ಟು ಜನಸಂಖ್ಯೆಯಿದ್ದು, ಕುಂದಾಪುರದಲ್ಲಿ ೩.೭೭ ಲಕ್ಷ ಹಾಗೂ ಕಾರ್ಕಳದಲ್ಲಿ ೨.೦೬ ಲಕ್ಷದಷ್ಟು ಜನಸಂಖ್ಯೆಯಿದೆ. ವಿವಿಧ ಧರ್ಮದ ಆದಾರದಲ್ಲಿ ಗಮನಿಸಿದಾಗ ೮೪% ದಷ್ಟು ಹಿಂದುಗಳೂ, ೧೧% ಮುಸ್ಲಿಂಮರೂ ಹಾಗೂ ಶೇಕಡಾ ೪ ರಷ್ಟು ಕ್ರಿಶ್ಚಿಯನ್ನರು ಇದ್ದಾರೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿವೆ. ೨೦೦೧ ನೇ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೦.೬೮ ಲಕ್ಷದಷ್ಟು ಪರಿಶಿಷ್ಟ ಜಾತಿಯ ಜನರೂ ಹಾಗೂ ೦.೪೨ ಲಕ್ಷದಷ್ಟು ಪರಿಶಿಷ್ಟ ಪಂಗಡದ ಜನರಿದ್ದಾರೆ. ಪರಿಶಿಷ್ಟ ಜಾತಿಯಾದ ಆದಿ ದ್ರಾವಿಡದಲ್ಲಿ ೩೮,೪೪೭, ಮೊಗೇರರು ೬,೧೭೧ ರಷ್ಟು ಹಾಗೂ ೪,೬೮೯ ರಷ್ಟು ಮುಂಡಾಲ ಜಾತಿಯವರಿದ್ದಾರೆ. ಒಟ್ಟು ಜನಸಂಖ್ಯೆಯ ಶೇಕಡಾ ೪೪ ರಷ್ಟು ದುಡಿಮೆಗಾರರಿದ್ದು, ಅದರಲ್ಲಿ ೫೫% ದಷ್ಟು ಪುರುಷರು ಹಾಗೂ ೩೪% ದಷ್ಟು ಮಹಿಳಾ ದುಡಿಮೆಗಾರರಿದ್ದಾರೆ.

ಜಿಲ್ಲೆಯ ಆರ್ಥಿಕ ವ್ಯವಸ್ಥೆಯು ಕೃಷಿಯ ಮೇಲೆ ಅವಲಂಬಿತವಾಗಿದೆ. ಜಿಲ್ಲೆಯಲ್ಲಿ ಒಟ್ಟು ೧.೮೩ ಲಕ್ಷದಷ್ಟು ಕೃಷಿಕರಿದ್ದು, ಎರಡು ಹೆಕ್ಟೇರ್ ಗಳಿಗಿಂತ ಕಡಿಮೆ ಮಟ್ಟದ ಸಣ್ಣ ಹಾಗೂ ಮಧ್ಯಮ ಭೂ ಹಿಡುವಳಿದಾರಿದ್ದಾರೆ. ಜಿಲ್ಲೆಯು ೯೮ ಕಿ.ಮೀ ಉದ್ದದ ಕರಾವಳಿ ತೀರವನ್ನು ಹೊಂದಿರುವುದರಿಂದ ಉಡುಪಿ ಹಾಗೂ ಕುಂದಾಪುರ ತಾಲೂಕುಗಳಲ್ಲಿ ಹೆಚ್ಚಿನ ಜನರು(೫೦೦೦ ಕುಟುಂಬಗಳು) ಮೀನುಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯಲ್ಲಿ ೧೩ ಬೃಹತ್ ಹಾಗೂ ಮಧ್ಯ ಪ್ರಮಾಣದ ಕೈಗಾರಿಕ ಉದ್ದಿಮೆಗಳಿವೆ ಇವುಗಳಲ್ಲಿ ಸುಮಾರು ೪೫,೬೧೨ ಮಂದಿ ದುಡಿಯುತ್ತಿದ್ದಾರೆ. ರಾಜ್ಯದ ಎಲ್ಲಾ ಜಿಲ್ಲೆಗಳೊಂದಿಗೆ ಹೋಲಿಸಿದಾಗ ಉಡುಪಿ ಜಿಲ್ಲೆಯು ಒಟ್ಟು ನಿವ್ವಳ ಆದಾಯ (ಜಿ.ಡಿ.ಪಿ) ಪಟ್ಟಿಯಲ್ಲಿ ೧೭ನೇ ಸ್ಥಾನದಲ್ಲಿದ್ದು, ತಲಾ ಆದಾಯದಲ್ಲಿ ೫ನೇ ಸ್ಥಾನದಲ್ಲಿದೆ. ಇದು ಕಳೆದ ಆರು ವರ್ಷಗಳಿಂದ ಉಡುಪಿ ಜಿಲ್ಲೆಯು ಕಡಿಮೆ ಮಟ್ಟದ ಆರ್ಥಿಕ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆ ಎಂದು ತಿಳಿಯಬಹುದಾಗಿದೆ.

**ಸಾಕ್ಷರತೆ ಪ್ರಮಾಣ**

ಪ್ರಾಚೀನ ಕಾಲದಲ್ಲಿ ಮಠಾಧಾರಿತ ಶಿಕ್ಷಣ ವ್ಯವಸ್ಥೆಯನ್ನು ಹೊಂದಿದ್ದ ಉಡುಪಿ ಜಿಲ್ಲೆಯಲ್ಲಿ ಕೇವಲ ಬ್ರಾಹ್ಮಣರಿಗೆ ಮಾತ್ರ ಶಿಕ್ಷಣ ಪಡೆಯುವ ಅವಕಾಶವಿತ್ತು. ತದನಂತರ ಕ್ರಿಶ್ಚಿಯನ್ ಮಿಶಿನರಿಗಳ ಆಗಮನದಿಂದಾಗಿ ಜಿಲ್ಲೆಯ ಶಿಕ್ಷಣ ವ್ಯವಸ್ಥೆಯಲ್ಲಿ ಹೆಚ್ಚಿನ ಮಟ್ಟದ ಸುಧಾರಣೆಗಳಾದವು. ಹೆಣ್ಣು ಮಕ್ಕಳು ಶಿಕ್ಷಣ ಪಡೆಯಲು ಅನರ್ಹರು ಎಂದು ಹಣೆಪಟ್ಟಿಕೊಟ್ಟಿರುವ ಸಮಾಜದಲ್ಲಿ ೧೮೮೨ ರಲ್ಲಿ ಬಾಸಿಲ್ ಮಿಷನ್ ಮೊದಲ ಹೆಣ್ಣು ಮಕ್ಕಳ ಶಾಲೆಯನ್ನು ಪ್ರಾರಂಭಿಸಿತು. ಕ್ರಿಶ್ಚಿಯನ್ ಮಿಷಿನರಿಗಳ ಶಾಲೆಗಳಲ್ಲಿ ಮೊದಲ ಬಾರಿಗೆ ಪರಿಶಿಷ್ಟ ಜಾತಿ ಹಾಗೂ

ಪರಿಶಿಷ್ಟ ಪಂಗಡದ ಮಕ್ಕಳಿಗೆ ಶಾಲೆಗೆ ದಾಖಲಾಗುವ ಅವಕಾಶ ಕಲ್ಪಿಸಲಾಯಿತು. ೧೮೫೫-೫೬ ರನೇ ಇಸವಿಯಲ್ಲಿ ಬ್ರಿಟೀಷರ ಕಾಲದಲ್ಲಿ ಸರಕಾರಿ ಶಾಲೆಗಳನ್ನು ಜಿಲ್ಲೆಯಲ್ಲಿ ಪ್ರಾರಂಭಿಸಲಾಯಿತು. ೧೯೪೭ ರ ನಂತರ ಖಾಸಗಿ ವ್ಯವಸ್ಥೆಯ ಸಹಯೋಗದೊಂದಿಗೆ ಉಡುಪಿಯು ಉತ್ತಮ ಮಟ್ಟದ ಶಿಕ್ಷಣವನ್ನು ಪ್ರಾರಂಭಿಸುವಲ್ಲಿ ಸಫಲವಾಯಿತು.

೨೦೦೧ನೇ ಜನಗಣತಿ ಪ್ರಕಾರ ಉಡುಪಿ ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇಕಡಾ ೮೧.೨೦. ಇದನ್ನು ರಾಜ್ಯಕ್ಕೆ ಹೋಲಿಸಿದಾಗ ಸಾಕ್ಷರತೆಯ ಪ್ರಮಾಣ ಶೇಕಡಾ ೬೬.೪೪. ಜಿಲ್ಲೆಯಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ೮೮.೨೩% ವಾದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇಕಡಾ ೭೫.೧೯. ಲಿಂಗಾಧಾರಿತ ಸಾಕ್ಷರತೆಯ ಅಸಮಾನತೆಯ ಪ್ರಮಾಣ ಶೇಕಡಾ ೧೪.೭೮ ರಷ್ಟಿದೆ. ದಕ್ಷಿಣ ಕನ್ನಡ ಜಿಲ್ಲೆಯ ನಂತರ ಅತ್ಯಂತ ಹೆಚ್ಚಿನ ಪ್ರಮಾಣದ ಸಾಕ್ಷರತೆಯನ್ನು ಹೊದಿರುವ ಜಿಲ್ಲೆ ಇದಾಗಿದೆ. ೧೯೯೧ ರಿಂದ ೨೦೦೧ ನೇ ಇಸವಿಯ ತನಕ ಶೇಕಡಾ ೯ ರಷ್ಟು ಸಾಕ್ಷರತೆಯ ಪ್ರಮಾಣದಲ್ಲಿ ಹೆಚ್ಚಳವಾಗಿದೆ. ಈ ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ಸಾಕ್ಷರತೆಯ ಪ್ರಮಾಣ ಶೇಕಡಾ ೭೯.೩೫ ರಷ್ಟಿದ್ದು, ಅದೇ ರೀತಿ ಲಿಂಗಾಧಾರಿತ ಸಾಕ್ಷರತೆಯ ಅಸಮಾನತೆಯ ಪ್ರಮಾಣ ರಾಜ್ಯದಲ್ಲೇ ಕಡಿಮೆ ಎಂದರೆ ಶೇಕಡಾ ೧೧ ರಷ್ಟಿದೆ.

**ಕೋಷ್ಟಕ ೩.೧.೧**

**ಉಡುಪಿ ಜಿಲ್ಲೆಯ ಸಾಕ್ಷರತೆಯ ವಿವರ**

| ತಾಲೂಕು | ಗ್ರಾಮೀಣ | | | ನಗರ | | | ಒಟ್ಟು | | |
|---|---|---|---|---|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| ಕಾರ್ಕಳ | ೮೬.೦೭ | ೭೪.೯ | ೮೦.೪ | ೯೪.೧೩ | ೮೬.೩೩ | ೯೦.೩೨ | ೮೭.೧೫ | ೭೬.೨೭ | ೮೧.೩೧ |
| ಕುಂದಾಪುರ | ೮೩.೮೨ | ೬೭.೧೭ | ೪೭.೭೨ | ೯೨.೩೨ | ೮೧.೫೧ | ೮೬.೮೨ | ೮೪.೫೩ | ೬೮.೨೧ | ೭೫.೬೫ |
| ಉಡುಪಿ | ೮೯.೯೨ | ೭೭.೮೭ | ೮೩.೨೩ | ೯೪.೨೩ | ೮೫.೮೩ | ೮೯.೮೨ | ೯೧.೧೫ | ೭೯.೦೮ | ೮೫.೧೪ |
| ಜಿಲ್ಲೆ | ೮೬.೮೫ | ೭೨.೯೭ | ೭೯.೩೫ | ೯೩.೮೩ | ೮೫.೩೧ | ೮೯.೪೭ | ೮೮.೨೩ | ೭೫.೧೯ | ೮೧.೨೫ |
| ರಾಜ್ಯ | ೭೦.೪೫ | ೪೮.೦೧ | ೫೯.೩೫ | ೮೬.೬೬ | ೭೪.೧೩ | ೮೦.೫೮ | ೭೧.೦೧ | ೫೬.೮೭ | ೬೬.೬೪ |

* ಜಿಲ್ಲಾ ಮಾನವ ಅಭಿವೃದ್ಧಿ ಮಾಹಿತಿ, ಉಡುಪಿ ೨೦೦೮

ಮೇಲ್ಕಂಡ ಅಂಕಿ ಅಂಶಗಳನ್ನು ಗಮನಿಸಿದಾಗ ಕುಂದಾಪುರ ತಾಲೂಕು ಅತೀ ಕಡಿಮೆ ಪ್ರಮಾಣದ (೭೫.೬೫%) ಸಾಕ್ಷರತೆಯನ್ನೂ, ಕಾರ್ಕಳ ತಾಲೂಕು ಶೇಕಡಾ ೮೧.೩೧ ಹಾಗೂ ಉಡುಪಿ ತಾಲೂಕು ಜಿಲ್ಲೆಯಲ್ಲಿ ಅತೀ ಹೆಚ್ಚಿನ(೮೫.೧೪%) ಸಾಕ್ಷರತೆಯನ್ನು ಹೊಂದಿದ ತಾಲೂಕಾಗಿದೆ. ತಾಲೂಕುವಾರು ಗ್ರಾಮೀಣ ಪ್ರದೇಶದ ಅಂಕಿ ಅಂಶಗಳನ್ನು ಗಮನಿಸಿದಾಗ ಕುಂದಾಪುರ ತಾಲೂಕಿನಲ್ಲಿ ಗ್ರಾಮೀಣ ಸಾಕ್ಷರತೆಯ ಪ್ರಮಾಣ ಶೇಕಡಾ

೭೪.೭೨. ಹಾಗೂ ಕಾರ್ಕಳ ತಾಲೂಕಿನ ನಗರ ಪ್ರದೇಶದ ಸಾಕ್ಷರತೆಯ ಪ್ರಮಾಣವು ಜಿಲ್ಲೆಯಲ್ಲೇ ಹೆಚ್ಚಿನ (೯೦.೩೨%) ಪ್ರಮಾಣದಲ್ಲಿದೆ. ಉಡುಪಿ ತಾಲೂಕಿನ ಗ್ರಾಮೀಣ ಪ್ರದೇಶದ ಸಾಕ್ಷರತೆಯ ಪ್ರಮಾಣ ಶೇಕಡಾ ೮೩.೨೩ ರಷ್ಟಿದ್ದರೆ ನಗರ ಪ್ರದೇಶದ ಸಾಕ್ಷರತೆಯ ಪ್ರಮಾಣ ಶೇಕಡಾ ೮೯.೮೨.

**ಉಡುಪಿ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿ**

೧೯೯೧ ರಲ್ಲಿ ಉಡುಪಿ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿಯ ಕ್ರಪಾಂಕ ೦.೬೫೫ ಹಾಗೆಯೇ ೨೦೦೧ ರಲ್ಲಿ ಮಾನವ ಅಭಿವೃದ್ಧಿ ಸೂಚಿಯಲ್ಲಿ ಕ್ರಪಾಂಕ ೦.೭೧೪ ನ್ನು ಪಡೆದು ರಾಜ್ಯದಲ್ಲಿ ಮೂರನೇ ಸ್ಥಾನವನ್ನು ಪಡೆದಿದೆ. ಪಂಚಾಯತ್ ರಾಜ್ ವ್ಯವಸ್ಥೆಯು ಉಡುಪಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ. ಉಡುಪಿ ತಾಲೂಕು ೬೧ ಗ್ರಾಮಪಂಚಾಯತ್‌ಗಳನ್ನೂ, ಕುಂದಾಪುರ ೫೦ ಹಾಗೂ ಕಾರ್ಕಳ ತಾಲೂಕು ೨೯ ಗ್ರಾಮ ಪಂಚಾಯತ್ ಗಳನ್ನು ಒಳಗೊಂಡಿದೆ.

**ಮಹಿಳಾ ಅಭಿವೃದ್ಧಿ ಮತ್ತು ಸಬಲೀಕರಣ**

ಮಹಿಳೆಯರ ಅಭಿವೃದ್ಧಿ ಮತ್ತು ಸಬಲೀಕರಣದ ನೆಲೆಯಲ್ಲಿ ಉಡುಪಿ ಜಿಲ್ಲೆಯು ಮಹತ್ತರವಾದ ಬೆಳವಣಿಗೆಯನ್ನು ಕಂಡಿದೆ. ಜಿಲ್ಲೆಯ ಹೆಚ್ಚಿನ ಕುಟುಂಬಗಳು ಮಾತೃಪ್ರಧಾನ ಕುಟುಂಬಗಳಾಗಿದ್ದು, 'ಅಳಿಯ ಸಂತಾನ' ಅಥವಾ 'ಅಳಿಯ ಕಟ್ಟು' ಎಂಬ ಕೌಟುಂಬಿಕ ವ್ಯವಸ್ಥೆಯನ್ನು ರೂಡಿಸಿಕೊಂಡಿವೆ. ರಾಜ್ಯದ ಇತರೆ ಜಿಲ್ಲೆಗಳಿಗೆ ಹೋಲಿಸಿದಾಗ ಉಡುಪಿ ಜಿಲ್ಲೆಯ ಮಹಿಳೆಯರ ಸ್ಥಿತಿಗತಿಯು ಸುಧಾರಣೆ ಹೊಂದುತ್ತಿದೆ ವಿವರಿಸಬಹುದು. ಮಹಿಳೆಯರ ಆಸ್ತಿಯ ಹಕ್ಕು ಮತ್ತು ಸಾಮಾಜಿಕ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಅವರ ಭಾಗವಹಿಸುವಿಕೆ. ಈ ಬೆಳವಣಿಗೆಗೆ ಉತ್ತಮ ಗುಣಮಟ್ಟದ ಶಿಕ್ಷಣ ವ್ಯವಸ್ಥೆಯೂ ಸಹಕಾರಿಯಾಗಿದೆ. ಜಿಲ್ಲೆಯ ಲಿಂಗಾನುಪಾತ ೧೦೦೦:೧೧೩೦ ಆಗಿದೆ. ಜಿಲ್ಲೆಯ ಒಟ್ಟು ೪.೮೮ ಲಕ್ಷ ದುಡಿಮೆಗಾರರಲ್ಲಿ, ೨ ಲಕ್ಷದಷ್ಟು ಮಹಿಳಾ ಕಾರ್ಮಿಕರಿದ್ದಾರೆ. ಪುರುಷರ ಜೀವಿತಾವಧಿ (೬೬) ಕ್ಕಿಂತ, ಮಹಿಳೆಯರ ಜೀವಿತಾವಧಿ ೬೯ ವರ್ಷಗಳು.

ಅನೇಕ ಮಹಿಳಾ ಅಭಿವೃದ್ಧಿ ಹಾಗೂ ಸಬಲೀಕರಣ ಯೋಜನೆಗಳ ಮೂಲಕ ಜಿಲ್ಲೆಯಲ್ಲಿ ಮಹಿಳೆಯರು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಲಯಗಳಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುವಲ್ಲಿ ಸಫಲರಾಗಿದ್ದಾರೆ. ಮಹಿಳಾ ಸಬಲೀಕರಣಕ್ಕೆ ಸಹಕಾರಿಯಾದ ಅಂಶಗಳನ್ನು ಈ ಕೆಳಗೆ ನೀಡಲಾಗಿದೆ.

- ಉತ್ತಮ ಗುಣಮಟ್ಟದ ಶಿಕ್ಷಣ ವ್ಯವಸ್ಥೆ ಹಾಗೂ ಆರೋಗ್ಯ ಸೇವೆ ಲಿಂಗ ಅಸಮಾನತೆಯನ್ನು ಕಡಿಮೆಗೊಳಿಸುವಲ್ಲಿ ಸಹಕಾರಿಯಾಗಿದೆ.
- ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಿಂದಾಗಿ ಮಹಿಳೆಯರು ಆಸ್ತಿಯ ಹಕ್ಕನ್ನು ಪಡೆದು ಆರ್ಥಿಕ ಸಬಲೀಕರಣ ಹೊಂದುವಂತಾಗಿದೆ.

- ಕೃಷಿ ಹಾಗೂ ಕೃಷಿಯೇತರ ಚಟುವಟಿಕೆಗಳಲ್ಲಿ ಜಿಲ್ಲೆಯಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.
- ಜಿಲ್ಲೆಯಲ್ಲಿ ಉತ್ತಮ ಮಟ್ಟದ ಬ್ಯಾಂಕಿಂಗ್ ಸೌಲಭ್ಯವಿದ್ದು ಇದು ಮಹಿಳೆಯರಿಗೆ ಕಿರು ಆರ್ಥಿಕ ವ್ಯವಸ್ಥೆಯಲ್ಲಿ ಸಹಕಾರಿಯಾಗಿದೆ.ಅನೇಕ ಸರ್ಕಾರೇತರ ಸಂಸ್ಥೆಗಳು ಮಹಿಳೆಯರ ಅಭಿವೃದ್ಧಿಗಾಗಿ ದುಡಿಯುತ್ತಿವೆ. ಉದಾ: ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ನಮ್ಮ ಭೂಮಿ, ನಾಗರಿಕ ಸೇವಾ ಟ್ರಸ್ಟ್ ಹಾಗೂ ನವೋದಯ ಟ್ರಸ್ಟ್ ಇತ್ಯಾದಿ.
- ರಾಜ್ಯದ ಇತರೆ ಜಿಲ್ಲೆಗಳಿಗೆ ಹೋಲಿಸಿದಾಗ ಉಡುಪಿ ಜಿಲ್ಲೆಯಲ್ಲಿ ಮಹಿಳೆಯರಿಗೆ ಉತ್ತಮ ವೇತನವನ್ನು ನೀಡಲಾಗುತ್ತಿದೆ.

**ಸ್ಥಳೀಯ ಆಡಳಿತದಲ್ಲಿ ಮಹಿಳೆಯರ ಭಾಗವಹಿಸುವಿಕೆ**ಸ್ಥಳೀಯ ಆಡಳಿತದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವುದನ್ನು ಗಮನಿಸಬಹುದು. ೨೦೦೫ ಚುನಾವಣಾ ವರದಿಯ ಪ್ರಕಾರ ೧೪೬ ಗ್ರಾಮ ಪಂಚಾಯತ್ ಗಳಲ್ಲಿ ಒಟ್ಟು ೨೩೬೮ ಸದಸ್ಯರಿದ್ದು ಅದರಲ್ಲಿ ೧೦೬೬(೪೫%) ಮಹಿಳಾ ಚುನಾಯಿತ ಸದಸ್ಯರಿದ್ದಾರೆ. ತಾಲೂಕು ಪಂಚಾಯತ್ ಚುನಾವಣೆಯಲ್ಲಿ ಒಟ್ಟು ೧೦೫ ಸ್ಥಾನಗಳಲ್ಲಿ ಮಹಿಳೆಯರು ೪೫(೪೦%) ಸ್ಥಾನಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಜಿಲ್ಲಾ ಪಂಚಾಯತ್‌ನ ಒಟ್ಟು ೨೫ ಸ್ಥಾನಗಳಲ್ಲಿ ಹತ್ತು ಸ್ಥಾನಗಳನ್ನು ಮಹಿಳೆಯರು ಪಡೆದುಕೊಂಡಿರುತ್ತಾರೆ. ೨೦೧೦ ನೇ ಗ್ರಾಮ ಪಂಚಾಯತ್ ಚುನಾವಣೆಯಲ್ಲಿ ಒಟ್ಟು ೨೬೯೨ ಸ್ಥಾನಗಳಲ್ಲಿ ೧೦೮೬ ಮಹಿಳಾ ಚುನಾಯಿತ ಸದಸ್ಯರಿದ್ದಾರೆ. ಈ ಬೆಳವಣಿಗೆಗಳು ಜಿಲ್ಲೆಯಲ್ಲಿ ಮಹಿಳೆಯರ ರಾಜಕೀಯ ವಲಯದ ಅಭಿವೃದ್ಧಿಯನ್ನು ತೋರಿಸುತ್ತದೆ.ಈ ಎಲ್ಲಾ ಮಹಿಳಾ ಅಭಿವೃದ್ಧಿ ಮತ್ತು ಸಬಲೀಕರಣದ ಬದಲಾವಣೆಗಳೊಂದಿಗೆ ಜಿಲ್ಲೆಯಲ್ಲಿ ಮಹಿಳೆಯರು ಕೆಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಕಡಿಯಾಗುತ್ತಿರುವ ಲಿಂಗಾನುಪಾತ, ಏಡ್ಸ್ ಕಾಯಿಲೆಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೇ ಬಲಿಯಾಗುವುದು, ವರದಕ್ಷಿಣೆಯ ಹೆಚ್ಚಳ ಹಾಗೂ ಕೃಷಿ ಮತ್ತು ಬೀಡಿ ಉದ್ದಿಮೆಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡಿರುವುದು. ಉತ್ತಮ ಶಿಕ್ಷಣ , ಆರೋಗ್ಯ ಸೇವೆ, ಆರ್ಥಿಕ ಮತ್ತು ಸಾಮಾಜಿಕ ಸವಲತ್ತುಗಳನ್ನು ಸಮರ್ಪಕವಾಗಿ ಬಳಸಿಕೊಂಡು ಉಡುಪಿ ಜಿಲ್ಲೆಯ ಮಹಿಳೆಯರ ಜೀವನ ಮಟ್ಟವು ಅಭಿವೃದ್ಧಿ ಹೊಂದಿದೆ.ಇವಿಷ್ಟೂ ಉಡುಪಿ ಜಿಲ್ಲೆಯ ಒಂದು ಪಕ್ಷಿ ನೋಟ. ಇನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಲಾದ ಪರಿಶಿಷ್ಟ ಜಾತಿ ಸಮುದಾಯದ ಬಗ್ಗೆ ತಿಳಿದು ಕೊಳ್ಳೋಣ.

## ೩.೨ ಮುಂಡಾಲ ಸಮುದಾಯದ ಪರಿಚಯ

ಪ್ರಸ್ತುತ ಅಧ್ಯಯನಕ್ಕಾಗಿ ಉಡುಪಿ ಜಿಲ್ಲೆಯ ಪರಿಶಿಷ್ಟ ಜಾತಿಯಾದ ಮುಂಡಾಲ ಸಮುದಾಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮೊದಲಾಗಿ ಉಡುಪಿ ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿಗಳ ಅಂಕಿ ಅಂಶಗಳ ಬಗ್ಗೆ ಗಮನ ಹರಿಸೋಣ.

**ಕೋಷ್ಟಕ ೩.೨.೧ ಉಡುಪಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಅಂಕಿ ಅಂಶಗಳು–೨೦೦೧**

| | ಪ್ರದೇಶ | ಜನಸಂಖ್ಯೆ | ಪುರುಷರು | ಮಹಿಳೆಯರು | ಲಿಂಗ ಪರಿಮಾಣ |
|---|---|---|---|---|---|
| ಉಡುಪಿ ಜಿಲ್ಲೆ | ಗ್ರಾಮೀಣ | ೬೭,೬೮೯೫೬,೪೧೦ | ೩೩,೩೪೫೨೭,೭೫೯ | ೩೪೩೪೪೨೮೬೫೧ | ೧೦೩೦೧೦೩೨ |
| | ನಗರ | ೧೧,೨೭೯ | ೫೫೮೬ | ೫೬೯೩ | ೧೦೧೯ |
| ಸಾಕ್ಷರತೆ | ಗ್ರಾಮೀಣ | ೭೦.೧೬೮.೨ | ೭೭.೭೭೫.೯ | ೬೨.೮೬೧.೦ | |
| | ನಗರ | ೭೯.೧ | ೮೬.೩ | ೭೧.೯ | |

(ಡಾ।ಟಿ.ಆರ್.ಚಂದ್ರಶೇಖರ್ ಕರ್ನಾಟಕದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಗಣತಿ ವಿವರಗಳು, ಅಭಿವೃದ್ಧಿ ಅಧ್ಯಯನ, ಸಂಪುಟ ೩, ಸಂಚಿಕೆ ೩,೨೦೦೫)

ಕರ್ನಾಟಕದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಗಣತಿ ವಿವರಗಳು ಎಂಬ ಲೇಖನದಲ್ಲಿ ಅಭಿವೃದ್ಧಿ ಅಧ್ಯಯನ–ಸಂಪುಟ ೩, ಸಂಚಿಕೆ ೩–೨೦೦೫ ಟಿ. ಆರ್. ಚಂದ್ರಶೇಖರ್ ಇವರು ಕರ್ನಾಟಕದಲ್ಲಿ ೨೦೦೧ ರ ಜನಗಣತಿಯ ಪ್ರಕಾರ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ ೮,೫೬೩,೯೩೦ ಹೊಂದಿದೆ. ಈ ಕೋಷ್ಟಕದಲ್ಲಿ ದ.ಕ. ಜಿಲ್ಲೆ ಮತ್ತು ಉಡುಪಿ ಜಿಲ್ಲೆಗೆ ಸಂಬಂಧಪಟ್ಟಂತೆ ಪರಿಶಿಷ್ಟ ಜಾತಿಯ ಜನಸಂಖ್ಯೆ ಹಾಗೂ ಸಾಕ್ಷರತೆಯ ಶೇಕಡಾವಾರು ಅಂಕಿ ಅಂಶವನ್ನು ಮಾತ್ರ ಇಲ್ಲಿ ಬಳಸಿಕೊಳ್ಳಲಾಗಿದೆ.

ವಿಭಜಿತ ಕರಾವಳಿ ಜಿಲ್ಲೆಯಲ್ಲಿ ಸುಮಾರು ಹದಿನೆಂಟು ಪರಿಶಿಷ್ಟ ಜಾತಿಯ ಉಪ ಜಾತಿಗಳಿವೆ. ಅವುಗಳ ಹೆಸರು ಈ ಕೆಳಗಿನಂತಿವೆ, ಬತ್ತಡರು, ಚಮ್ಮಾರ್ ವ ಮುಚಿಯವರು, ಚಂಡಾಲರು, ಪಾನೋ, ಗೊಡ್ಡರು, ಹೊಲೆಯ,ಕೂಸ,ಮಾದಿಗ,ಮಾಯಿಲರು,ಮೊಗೇರ್,ಮುಂಡಾಲ,ಪಂಬದ,ರಾಣೆಯಾರ್,ಸಮಗಾರ,ತೋಟಿ,ಹಸ್ಲರು,ನಲ್ಕೆದಾಯ ಹಾಗೂ ಪರೆಯನ್. ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾದ ಉಡುಪಿ ಜಿಲ್ಲೆಯ ಪರಿಶಿಷ್ಟ ಜಾತಿ ಸಮುದಾಯವೇ ಮುಂಡಾಲ ಜಾತಿ ಸಮುದಾಯ.

ಕರ್ನಾಟಕದಲ್ಲಿ ಮುಂಡಾಲರೆಂದು ಕರೆಯಲ್ಪಡುವ ಜನಾಂಗದವರು ಹೆಚ್ಚಾಗಿ ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಪಡು ಕರಾವಳಿಯ ಬಯಲು ಪ್ರದೇಶದಲ್ಲಿರುವ ಸಮುದಾಯದವರು. ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಬಾರಕೂರಿನಿಂದ ಮೊದಲ್ಗೊಂಡು, ದಕ್ಷಿಣದ ಈಗಿನ ಕೇರಳ ಪ್ರಾಂತ್ಯದ ನೀಲೇಶ್ವರದವರೆಗಿನ ಕರಾವಳಿಯಲ್ಲಿ ಇವರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಾರೆ. ಉಡುಪಿ ಜಿಲ್ಲೆಯ ಕಾಪು, ಮಲ್ಪೆ, ಪಡುಬಿದ್ರಿ ಹಾಗೂ ಕುಂದಾಪುರ ಕಡೆ ಕೂಡಾ ಇವರು ಅಧಿಕ ಸಂಖ್ಯೆಯಲ್ಲಿದ್ದಾರೆ. ವಿಭಜಿತ ಜಿಲ್ಲೆಯಲ್ಲಿ

ಪುರಾತನ ಕಾಲದಿಂದಲೂ ವಾಸಮಾಡಿಕೊಂಡಿದ್ದ ಈ ಸಮುದಾಯವು ಜಿಲ್ಲೆಯ ಮೂಲವಾಸಿ ಸಮುದಾಯಗಳಲ್ಲಿ ಒಂದು ಸಮುದಾಯವೆಂದು ಹೇಳಲಾಗಿದೆ. ಆದುದರಿಂದಾಗಿ ಇವರಲ್ಲಿ ಕೆಲವರು ತಾವು ಆದಿ ದ್ರಾವಿಡರೆಂಬುದಾಗಿ ಕೂಡ ಕರೆಸಿಕೊಳ್ಳುವರು.

ಹಿಂದಿನ ಕಾಲದಿಂದಲೂ ಈ ಸಮುದಾಯದವರು, ಜಿಲ್ಲೆಯ ಜೈನರ, ಅಲೂಪ ಅರಸರ, ಬಂಟರ, ಬಲ್ಲಾಳ ಅರಸರ ಹಾಗೂ ಇತರ ಜಮೀನ್ದಾರರ ಮೂಲದ ಆಳುಗಳಾಗಿ ಜಮೀನುಗಳಲ್ಲಿ ಒಂದು ನಿಶ್ಚಿತ ಸಂಬಳಕ್ಕೆ ದುಡಿಯುತ್ತಿದ್ದರು, ಅದನ್ನೇ ಅವರ ಮೂಲ ಕಸುಬು ಎಂದು ಪರಿಗಣಿಸಲಾಯಿತು. ಅನಾದಿ ಕಾಲದಿಂದಲೂ ಮುಂಡಾಲರು ಬೇಸಾಯವನ್ನೇ ತಮ್ಮ ಜೀವನೋಪಾಯವಾಗಿ ಇಟ್ಟುಕೊಂಡವರು. ರಾಜ್ಯದ ಪೂರ್ವ ಭಾಗದಲ್ಲಿ ಅನೇಕರು ಮೈಸೂರು ಪ್ರಾಂತ್ಯದ ಹಾಗು ಮಲೆನಾಡು ಪ್ರದೇಶಗಳಲ್ಲಿ ತೋಟಗಳ ದಲ್ಲಾಳಿಗಳಿಂದಾಗಿ ಅಲ್ಲಿಯ ಕಾಫಿ, ಏಲಕ್ಕಿ ಕರಿ ಮೆಣಸು ತೋಟಗಳಲ್ಲಿ ಜೀತದ ಆಳುಗಳಾಗಿ ದುಡಿಯುವ ಪದ್ದತಿ ಬಳಕೆಯಲ್ಲಿತ್ತು.

**ಚಾರಿತ್ರಿಕ ಹಿನ್ನಲೆ:**

ಜೈನ ಅರಸರ ಕಾಲದಲ್ಲಿ ಮುಂಡಾಲರು ಸೇನಾಧಿಪತಿಗಳಾಗಿದ್ದರು ಎಂದು ತಿಳಿದು ಬಂದಿದೆ. ಮಯೂರ ವರ್ಮನ ಸಂಗಡ ಯುದ್ಧ ಮಾಡಿದವರು ಮುಂಡಾಲರು. ಮೂಲಿಕೆ, ಪಡುಬಿದರೆ, ಎರ್ಮಾಳು, ಕಾಪು, ಕಟಪಾಡಿ ಮುಂತಾದ ಜೈನ ಅರಸರ ಸೈನ್ಯದಲ್ಲಿ ಬಾಕುಡ ಸೇನಾಧಿಪತಿಗಳ ಕೈಕೆಳಗೆ ಮುಂಡಾಲ ಸೈನ್ಯವೂ ಇತ್ತೆಂದು ತಿಳಿದು ಬಂದಿದೆ. (ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ–ಮಂಜೇಶ್ವರ ಗಣಪತಿ ರಾವ್)

ಜಿಲ್ಲೆಯ ತುಳುನಾಡಿನ ಗತವೈಭವದ ಕಾಲದಲ್ಲಿ ಜೈನ ಅರಸರ, ಬಂಟ, ಬಲ್ಲಾಳರ ಹಾಗೂ ಗುತ್ತು ಸೀಮೆ ಅರಸರ ಒಡೆತನಕ್ಕೆ ಸೇರಿದ ಜಮೀನುಗಳ ಪೈರುಗಳ, ಭತ್ತ ಶೇಖರಣೆ ಇಡುವ, ತುಳುವಿನಲ್ಲಿ 'ತುಪ್ಪೆ' ಎಂಬ ಬೈಹುಲ್ಲಿನ ಕಣಜಗಳ ಕಾವಲು ಕೆಲಸಕ್ಕೆ ಈ ಸಮುದಾಯದವರನ್ನು ನೇಮಿಸಲಾಗುತ್ತಿತ್ತು. ಅಂತೆಯೇ ಇತರ ಮಾಗಣೆಯ ಅರಸರು ಆಕ್ರಮಣ ಮಾಡಿದಾಗ ತಮ್ಮ ಮೂಲದ ಆಳಾದ ಮುಂಡಾಲ ಸಮುದಾಯದ ಮುಖ್ಯ ಗುರಿಕಾರನನ್ನು ಗುತ್ತಿನ ಅರಸನು ಯಾ ಸೀಮೆಗುತ್ತುಗಳ ಒಡೆತನದ ಯಜಮಾನನು ಕರೆದು, ತಮ್ಮ ಬೀಡಿನ ಅರಮನೆಯಲ್ಲಿ ಆ ಉದ್ದೇಶ ನಿಮಿತ್ತವಾಗಿ ತಯಾರಿಸಲಾದ 'ತಂದೇಲು' (ತಾಳೆ ಮರದಿಂದ ತಯಾರಿಸಲಾದ ಇಂದು ಬಗೆಯ ಬಡಿಗೆ) ನ್ನು ಗುರಿಕಾರನ ಕೈಯಲ್ಲಿ ನೆರೆದ ಸಭೆಯ ಮುಂದೆ ಕೊಟ್ಟು, ತಮ್ಮ ಗದ್ದೆಗಳ ಗಡಿ ಸ್ಥಳಕ್ಕೆ ಮುಂದಾಗಿ ಕಳುಹಿಸಿಕೊಡುವ ಪದ್ಧತಿ ಬಳಕೆಯಲ್ಲಿತ್ತು ಎಂಬುದಾಗಿ ಪೂರ್ವಿಕರ ಅಭಿಪ್ರಾಯವಾಗಿದೆ. ಅರಸನ ಅಪಾಯ ಕಾಲದಲ್ಲಿ ರಾಜ್ಯದ ಗಡಿ ಸ್ಥಳಕ್ಕೆ ಮುಂದಾಗಿ ಹೋಗಿ ಗಡಿಯನ್ನು ರಕ್ಷಿಸುವ ಈ ಸಮುದಾಯಕ್ಕೆ "ಮುಂದಿನ ಆಳು" ಎಂದು ಕರೆಯುವ ವಾಡಿಕೆಯ ಹೆಸರು ಉಂಟಾಯಿತು. ಕ್ರಮೇಣ ಮುಂದಾಳು ಹೋಗಿ 'ಮುಂಡಾಲರು' ಎಂದು ಕರೆಯುವ ಕರೆಯುವ ಪದ್ಧತಿ ಬಳಕೆಗೆ ಬಂತು ಎಂದು ಹೇಳಲಾಗಿದೆ.

ಇವರಲ್ಲಿ ಕಪ್ಪು ಹಾಗೂ ಬಿಳಿ ಎರಡೂ ವರ್ಣದವರು ಇದ್ದಾರೆ. ಇವರದು ಗಟ್ಟಿ ಮುಟ್ಟು ಶರೀರ. ಪೂರ್ವದಲ್ಲಿ ಇವರು ಹೆಚ್ಚಾಗಿ ತಲೆಗೆ ಅಡಿಕೆ ಹಾಳೆಯ 'ಮುಟ್ಟಾಳೆ' ಎಂಬ ಸಪೂರದ ತಲೆಕವಚವನ್ನು ಧರಿಸುತ್ತಿದ್ದರು. ಅಂತೆಯೇ ಗಂಡಸರು ಹೆಂಗಸರಂತೆ ಉದ್ದನೆಯ ಕೂದಲು ಇಡುವ ಪದ್ಧತಿ ಇತ್ತು. ಕಿವಿಗೆ 'ಕೊಡಂಗೆ' ಎಂದು ಕರೆಯುವ ಹಿತ್ತಾಳೆಯ ಬೆಂಡು (ಉರುಟು ಆಕೃತಿಯ)ಆಭರಣವನ್ನು ಧರಿಸುತ್ತಿದ್ದರು. ಇವರ ಹೆಂಗಸರು ಆಭರಣ ಪ್ರಿಯರು. ಕೊರಳಿಗೆ ಕನ್ನಡಿ ಮಣಿ, ಹಿತ್ತಾಳೆಯ ಪಟ್ಟ ಹಾಗೂ ಕೈಗಳಿಗೆ ಕಂಚಿನ, ಹಿತ್ತಾಳೆಯ ಯಾ ತಾಮ್ರದ ಕಂಕಣ ಎಂದು ಕರೆಯುವ ಕೈ ಬಳೆಯನ್ನು ಧರಿಸುತ್ತಿದ್ದರು. ಅಂತೆಯೇ ಕಿವಿಗಳಿಗೆ ಬೆಂಡೋಲೆ, ಮೂಗಿಗೆ ಮೂಗುತಿ (ಬೆಳ್ಳಿ ಯಾ ಬಂಗಾರದ) ಯನ್ನು ಧರಿಸುತ್ತಿದ್ದರು.

**ಆಚರಣೆಗಳು:**

**ದೈವಾರಾಧನೆ:** ಮುಂಡಾಲರಲ್ಲಿ ವರ್ಷಂಪ್ರತಿ ತಮ್ಮ ದೈವವಾದ ಕೋಟೆದ ಬಬ್ಬು ದೈವಕ್ಕೆ ನೇಮ, ಉತ್ಸವ ಇತ್ಯಾದಿ ಕಾರ್ಯಗಳನ್ನು ಜರಗಿಸಿ ಆರಾಧಿಸುವರು. ಇವರು ನೆಲೆಸಿರುವ ಪ್ರತೀ ಕೊಲನಿಯಲ್ಲಿಯೂ ಬಬ್ಬುಸ್ವಾಮಿಯ ಪ್ರತ್ಯೇಕ ದೈವಸ್ಥಾನವಿದೆ. ಅಲ್ಲದೆ ಇತರ ತುಳುನಾಡಿನ ಭೂತ, ದೈವಗಳಾದ ಪಂಜುರ್ಲಿ, ಗುಳಿಗ, ಧರ್ಮದೈವ, ಕಲ್ಲುರ್ಟಿ, ಚಾಮುಂಡಿ, ಕೊರಗಜ್ಜ ಮುಂತಾದ ಸುಮಾರು ೩೯ ಭೂತಗಳನ್ನು ಇವರು ಆರಾಧಿಸುತ್ತಾರೆ.

**ಗುರಿಕಾರ ಪದ್ಧತಿ:**

ಈ ಸಮುದಾಯದ ಪ್ರತಿ ಗ್ರಾಮಕ್ಕೆ ಒಬ್ಬನಂತೆ ಸಮಾಜದ ಗುರಿಕಾರನಿದ್ದಾನೆ. ಈತನೇ ಇವರ ಸಮಾಜದ ಸೂತ್ರಧಾರಿ, ಮದುವೆ,ಮರಣ, ಉತ್ತರಕ್ರಿಯೆ ಮುಂತಾದ ಸಮಾರಂಭದ ಸಮಯ ಗುರಿಕಾರನ ನಿರ್ಣಯಕ್ಕೆ ತುಂಬಾ ಮಹತ್ವ ಮತ್ತು ಮನ್ನಣೆ ಕೊಡುವರು. ಜಾತಿಯ ನೀತಿಗೆ ದಕ್ಕೆ ಬಂದರೆ ಮೊದಲು ಗ್ರಾಮದಲ್ಲಿ ನ್ಯಾಯ ಇತ್ಯರ್ಥವಾಗಬೇಕು. ಅನಂತರ ೫ ಗ್ರಾಮಗಳು ಒಟ್ಟಾಗಿ ಹಾಗು ಮುಂದೆ ಸೀಮೆ, ಹೋಬಳಿಯವರು ಕೊಡುವ ಪೂರ್ವ ಪದ್ಧತಿ ಇದೆ. ಪೂರ್ವದಲ್ಲಿ ಇವರ ಸಮಾಜದ ಗುರಿಕಾರನನ್ನು ನೇಮಿಸುವ ಅಧಿಕಾರ ಅವರು ನೆಲೆಸಿದ ಗುತ್ತು, ಬೀಡುಗಳ ಯಜಮಾನರಿಗಿತ್ತು ಎಂದು ಹೇಳಲಾಗಿದೆ.

**ಮದಿಮಲ್ ಮದಿಮೆ:** ಇವರಲ್ಲಿ ಹುಡುಗಿ ಮೈನೆರೆದರೆ ಅವಳನ್ನು ಅಂದು ಬೇರೆ ಕೋಣೆಯಲ್ಲಿಟ್ಟು ಏಳು ಗಡಿಗೆಯ ನೀರಿನಿಂದ ಸ್ನಾನ ಮಾಡಿಸಿ ತುಳುವಿನಲ್ಲಿ ಹೇಳುವ ಮದಿಮಲ್ ಮದಿಮೆ ಎಂಬ ಮಂಗಳಕಾರ್ಯ ಮಾಡುವ ಪದ್ಧತಿ ಇದೆ.

**ಬಳಿ/ಗೋತ್ರ:** ಇವರಲ್ಲಿ ಸುಮಾರು ೧೬ ಬಳಿ(ಗೋತ್ರ)ಗಳ ಸಂಪ್ರದಾಯವಿದೆ. ಕುಟುಂಬಗಳ ಬಳಿ ಸಂಪ್ರದಾಯಕ್ಕೆ ಇವರು ತುಂಬಾ ಮಹತ್ವ ಕೊಡುವರು. ಇವರಲ್ಲಿ ಅಳಿಯಕಟ್ಟು ಸಂಪ್ರದಾಯವನ್ನು ಆಚರಿಸುತ್ತಾರೆ.

**ಮದುವೆ:**

ಮುಂಡಾಲರಲ್ಲಿ ಮದುವೆ ಸಮಾರಂಭವನ್ನು ಬಹಳ ಗೌಜಿಯಿಂದ ನೆರವೇರಿಸುವರು. ಹಿಂದೆ ಹೆಣ್ಣು ಹುಡುಕುವ ಕಾರ್ಯಕ್ಕೆ ಸಮಾಜದ ಗುರಿಕಾರನ ಜೊತೆ ಗಂಡಿನ ತಂದೆ ಯಾ ಸಮೀಪದ ಸಂಬಂಧಿಕರು ಹೋಗುತ್ತಿದ್ದರು. ಮದುಮಗನ ಕಡೆಯವರು ಹೆಣ್ಣು ನೋಡಿ ಒಪ್ಪಿಗೆಯಾದ ಬಳಿಕ ಮದುಮಗಳ ನಿಶ್ಚಯ ಎನ್ನುವ ದಿನ ಮದುಮಗಳಿಗೆ ಉಂಗುರ ಹಾಕಿ ಮದುವೆಗೆ ದಿನ ನಿರ್ಧರಿಸುವ ಸಮಾರಂಭವನ್ನು ಮಾಡುತ್ತಾರೆ. ಅಂದು ವರನ ಕಡೆಯ ಸಮಾಜದ ಗುರಿಕಾರನೂ ಮತ್ತು ಅವರ ಗ್ರಾಮದ ಹತ್ತು ಸಮಸ್ತರೂ ಸೇರಿ ಮದುಮಗಳ ಮನೆಗೆ ರಾತ್ರಿ ಸಮಯ ಹೋಗಿ ವಧುದಕ್ಷಿಣೆ ರೂಪದಲ್ಲಿ ವರನು ಕೊಡಬೇಕಾದ ನಾಲ್ಕು ವರಹ ಹಣ(ರೂ.೧೬),ಕೈ ಬಳೆಯ ಖರ್ಚು ಒಂದು ರೂಪಾಯಿ, ವಧುವಿನ ದಾರಿ ಖರ್ಚು ಎಂದು ಒಟ್ಟು ರೂ.೧೬ ನ್ನು ಹಿಂದೆ ವರನು ಕೊಡುವ ಪದ್ಧತಿ ಇತ್ತು. ಅಂತೆಯೇ ಹೆಣ್ಣಿನ ಬೆರಳಿಗೆ ಬೆಳ್ಳಿ, ಹಿತ್ತಾಳೆ ಅಥವಾ ಚಿನ್ನದ ಉಂಗುರ ತೊಡಿಸಿ ಮದುವೆಗೆ ದಿನ ನಿರ್ಧರಿಸುವರು. ಮದುವೆಯು ಹೆಚ್ಚಾಗಿ ಹಿಂದೆ ರಾತ್ರಿಯ ಸಮಯದಲ್ಲಿಯೇ ಜರಗುತ್ತಿತ್ತು. ವರನ ಕಡೆಯವರು ಗ್ರಾಮಸ್ಥರಿಂದ ಕೂಡಿದ ದಿಬ್ಬಣ ಗೌಜಿಗದ್ದಲದಿಂದ ತುಳು ಪಾಡ್ದವನ್ನು ಹಾಡುತ್ತಾ, ಕೈಮಣಿ ಎಂಬ ತಾಳವನ್ನು ಬಡಿಯುತ್ತಾ ಹೋಗುವರು. ವರನ ದಿಬ್ಬಣವು ರಾತ್ರಿ ಸಮಯ ವಧುವಿನ ಮನೆಗೆ ಹೋಗುವ ಪದ್ಧತಿ ಇತ್ತು.

ರಾತ್ರಿ ಮದುವೆಯ ಮುಹೂರ್ತಕ್ಕೆ ಮೊದಲು ವರನನ್ನು ಸಿಂಗರಿಸಿ ವರನ ಕೈಗಳಿಗೆ ಹಿತ್ತಾಳೆಯ ಯಾ ಕಂಚಿನ ಆಭರಣವನ್ನು ತೊಡಿಸಿ, 'ಒಂಟಿ'ಯನ್ನೂ ಕಿವಿಗೂ, 'ಪಿಜಿರ್' ಎಂದು ಹೇಳುವ ಹಿತ್ತಾಳೆ ಯಾ ಬಂಗಾರದ ಮೆರುಗು ಇರುವ ಸರವನ್ನು ಕಿವಿಯ ಮೇಲ್ಭಾದಲ್ಲಿ ಸುತ್ತಾಗಿ ತೊಡಿಸುವರು. ಈ ರೀತಿಯಾಗಿ ಕಿವಿಗಳಿಗೆ ಆಭರಣ ತೊಡಿಸದೆ ಮದುಮಗನನ್ನು ಮದುವೆಯ ಚಪ್ಪರಕ್ಕೆ ಪ್ರವೇಶಿಸಲು ಇವರ ಗುರಿಕಾರರು ಬಿಡಲಾರರು. ಅಂತೆಯೇ ತಲೆಗೆ ತುಳುವಿನಲ್ಲಿ 'ಪುಲ್ಲಯಿ' ಎಂದು ಕರೆಯುವ ಕೆಂಪು ಮುಂಡಾಸನ್ನು ವರನಿಗೆ ತೊಡಿಸುವರು. ವರನ ಒಂದು ಕೈಯಲ್ಲಿ 'ಕಡ್ತಲೆ'ಯನ್ನೂ, ಎಡಕೈಯಲ್ಲಿ ಸಣ್ಣ ರುಮಾಲನ್ನು ಕೊಟ್ಟು ಮುಹೂರ್ತಕ್ಕೆ ನಿಲ್ಲಿಸುವರು. ವಧುವಿಗೆ ಕೈ ಮಗ್ಗದ ಬಿಳಿ ಸೀರೆಯನ್ನು ತೊಡಿಸಿ ಸೊಂಟದ ಮೇಲೆ ಎದೆಯ ಭಾಗಕ್ಕೆ 'ಮೆನ್ನಟೆ' ಎಂದು ತುಳುವಿನಲ್ಲಿ ಹೇಳುವ ಚೌಕಾಕೃತಿಯ ಸಣ್ಣದೊಂದು ಕೈಮಗ್ಗದ ಬಿಳಿ ರುಮಾಲನ್ನು ಕಟ್ಟುವರು. ಕೈ,ಕಿವಿ,ಮೂಗು ಹಾಗು ಕೊರಳಿಗೆ ಹಿತ್ತಾಳೆಯ ಯಾ ತಾಮ್ರದ ಕೈ ಬಳೆ, ಮಣಿಸರ ಇತ್ಯಾದಿ ಆಭರಣಗಳನ್ನು ತೊಡಿಸುವರು. ಅಂತೆಯೇ ವದುವಿನ ಕೈಯಲ್ಲಿ 'ಗೆಜ್ಜೆ ಕತ್ತಿ' (ಸುಮಾರು ೪ ಇಂಚಿನ ಉದ್ದನೆ ಬಾಗಿದ್ದು, ಅದರ ಕೆಳಗೆ ಗೆಜ್ಜೆಯಂತಹ ಮಣಿಯ ಜೋಡಣೆ ಇರುವುದು) ವೀಳ್ಯದೆಲೆ, ಅಡಿಕೆ ಮತ್ತು ಬಿಳಿ ವಸ್ತ್ರದ ರುಮಾಲನ್ನು ಕೊಟ್ಟು ಧಾರೆಯೆರೆಯುವ ಮೊದಲು ತಮ್ಮ ಕುಲ ದೈವಗಳಿಗೂ, ನಾಗ ಬ್ರಹ್ಮ ದೇವರಿಗೂ ಗ್ರಾಮದ ಗುರಿಕಾರನು ಪ್ರಾರ್ಥನೆ ಮಾಡಿ ನೆರೆದ ಹತ್ತು ಸಮಸ್ತರ ಒಪ್ಪಿಗೆಯನ್ನು ಗುರಿಕಾರನು ಪಡೆದು, ವಧುವನ್ನು ವರನ ಕೈಗೆ ಜೋಡಿಸಿ ಧಾರೆಯೆರೆಯುವನು.

ಅನಂತರ ಅಂಗಳದಲ್ಲಿ ಎತ್ತರವಾದ ಮಣೆಯ ಮೇಲೆ ದೇವರಿಗೆ ಹಣತೆ ದೀಪವಿಟ್ಟು ಒಂದು ಬಾಳೆ ಎಲೆಯಲ್ಲಿ ಅಕ್ಕಿ ಕಾಳು, ವೀಳ್ಯದೆಲೆ, ಅಡಿಕೆ ಮುಂತಾದ ವಸ್ತುಗಳನ್ನು, ಇಟ್ಟು ಎದುರಿಗೆ ವಧೂವರರನ್ನು ಒಟ್ಟಿಗೆ ಕುಳ್ಳಿರಿಸಿ ನೆರೆದ ಸಭಿಕರೆಲ್ಲರ ಅನುಮತಿಯಿಂದ ಗುರಿಕಾರನು ಮೊದಲು ಅಕ್ಕಿಕಾಳನ್ನು ವಧೂವರರ ತಲೆಗೆ ಹಾಕುವನು. ಅನಂತರ ನೆರೆದವರೆಲ್ಲರೂ ಅಕ್ಕಿಕಾಳು ಹಾಕುವರು ಇದಕ್ಕೆ ತುಳುವಿನಲ್ಲಿ 'ದೇಸೆ ಪಾಡುನು' ಎಂದು ಹೇಳುವರು. ವಧುವಿನ ಮನೆಯ ಕಾರ್ಯಕ್ರಮವನ್ನು ಮುಗಿಸಿ ರಾತ್ರಿಯೇ ವರನ ಮನೆಗೆ ವಧುವಿನ ಜತೆ ದಿಬ್ಬಣ ಹಿಂತೆರಳುವುದು. ಆದರೆ ಇದೀಗ ಮುಂಡಾಲರಲ್ಲಿ ಮದುವೆಯ ರೀತಿ ನೀತಿಗಳಲ್ಲಿ ಬದಲಾವಣೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಮದುವೆ ಸಂಪ್ರದಾಯಗಳು ಬ್ರಾಹ್ಮಣ ಪುರೋಹಿತರ ಮಾರ್ಗದರ್ಶನದಲ್ಲಿ ನಡೆಯುತ್ತಿವೆ.

ಹೆರಿಗೆ ಸಮಯದಲ್ಲಿ ಭಂಡಾರ ಇಡುವ ಮನೆಯಾದರೆ ಸೂತಕ ಪದ್ಧತಿಯನ್ನು ಆಚರಿಸುವರು. ಆ ಮನೆಗೆ ಉಳಿದವರು ಮೂರು ದಿನ ಹೋಗಬಾರದು.

**ಮರಣ:**

ಮುಂಡಾಲರು ಸತ್ತರೆ ಹೆಚ್ಚಾಗಿ ಹೂಳಿಡುವ ಕ್ರಮ. ಈಗೀಗ ಮಾತ್ರ ದಹನ ಕೂಡಾ ಮಾಡುವರು. ಸತ್ತ ೧೬ ನೇ ದಿನ ಉತ್ತರ ಕ್ರಿಯೆ ಮಾಡುವರು. ಉತ್ತರಕ್ರಿಯೆಯ ದಿನ ಸತ್ತವರ ಸಂಬಂಧಿಕರು ಮೀಸೆ, ಗಡ್ಡ ಬೋಳಿಸಿ ಉತ್ತರಕ್ರಿಯೆ ನಡೆಯುವ ಅಂಗಳದಲ್ಲಿ ದುಃಖ ಮಾಡುವವರ ಸಾಲಿನಲ್ಲಿ ನಿಂತು 'ಮುರಿಯೋ' ಎಂದು ಕೂಗುವರು. ಮನೆಯ ಸಮೀಪ ಮೂರು ಮಾರ್ಗ ಕೂಡುವಲ್ಲಿ ಒಂದು ಸಣ್ಣ ಬಿದಿರಿನ ಗುಡಿಸಲು ಕಟ್ಟಿ, ಅದಕ್ಕೆ ಬಿಳಿ ವಸ್ತ್ರ ಮುಚ್ಚಿ, ಅದರ ಒಳಗೆ ಮಣ್ಣಿನ ಮನುಷ್ಯನ ರೂಪ ಮಾಡಿ ಅದನ್ನು ಸುಡುವ ಪದ್ಧತಿ ಇದೆ.

ಇವರ ಹೆಂಗಸರು ಗಂಡಸರ ಜೊತೆ ದುಡಿಯುವರು. ಬಿಡುವಿನ ಸಮಯದಲ್ಲಿ ಕಾಡಿಗೆ ಹೋಗಿ ಸೊಪ್ಪು, ಕಟ್ಟಿಗೆಗಳನ್ನು ಕಡಿದು ತಂದು ವಿಕ್ರಯಿಸಿ ತಮ್ಮ ಸಂಸಾರ ಜೀವನದಲ್ಲಿ ಗಂಡಸರ ಜೊತೆ ಸಹಕರಿಸುವರು. ಆದರೆ ಇತ್ತೀಚೆಗೆ ಪಟ್ಟಣಗಳಲ್ಲಿ ಗೇರುಬೀಜದ, ಹಂಚಿನ ಹಾಗೂ ಬೀಡಿ ಕಟ್ಟುವ ಕೈಗಾರಿಕೆಗಳಲ್ಲಿ ಅಧಿಕವಾಗಿ ದುಡಿಯುವರು. ಇವರ ಹೆಂಗಸರು ಗಂಡಸರಿಗಿಂತಲೂ ಹೆಚ್ಚು ಕಷ್ಟಪಟ್ಟು ದುಡಿಯುವ ಮನೋವೃತ್ತಿಯವರು. ಮಾತ್ರವಲ್ಲದೆ ಹೆಂಗಸರೇ ಕುಟುಂಬದ ಜವಾಬ್ದಾರಿಯನ್ನು ವಹಿಸುವರು. ತಮ್ಮ ಜಾತಿಗಿಂತ ಕೀಳು ಜಾತಿಯವರನ್ನು ಮದುವೆಯಾದರೆ ಅಂತಹ ವ್ಯಕ್ತಿಗಳನ್ನು ಇಡೀ ಸಮಾಜದವರೇ ತಮ್ಮ ಜಾತಿಯ ಕಟ್ಟಳೆ ಪ್ರಕಾರ ಏಳು ಮಾಗಣೆಗಳ ಸಭೆ ಸೇರಿ ತಮ್ಮ ಸಮಾಜದಿಂದ ಹೊರ ಹಾಕುವ ಜಾತಿ ಕಟ್ಟಳೆ ಇವರಲ್ಲಿದೆ. ಇವರಲ್ಲಿ ವಿಧವೆಯರು ಪುನಃ ಮದುವೆಯಾಗಬಹುದು. ಅಂತೆಯೇ ಓರ್ವ ಗಂಡಸು ೨ ಯಾ ೩ ಮದುವೆಯಾಗಬಹುದು, ಇವರಲ್ಲಿ ವಿವಾಹ ವಿಚ್ಛೇದನಗಳಿಗೆ ಅವಕಾಶವಿತ್ತು. ಆದರೆ ಹೆಣ್ಣು ಗಂಡನಿಂದ ವಿಚ್ಛೇದನೆ ಪಡೆಯುದಾದರೆ, ಗಂಡನಿಂದ ಪಡೆದ ವಧುದಕ್ಷಿಣೆ ಮತ್ತು ದಾರಿ ಖರ್ಚಿನ ಹಣ ಇತ್ಯಾದಿಗಳನ್ನು ಮರಳಿ ಕೊಡಬೇಕಾಗುವುದು. (ಪಿ.ಕಮಲಾಕ್ಷ)

ಪ್ರಸ್ತುತ ಮುಂಡಾಲ ಸಮುದಾಯದಲ್ಲಿ ವಿದ್ಯಾಭ್ಯಾಸ ಪಡೆದುಕೊಂಡು ಉದ್ಯೋಗ ಮಾರುಕಟ್ಟೆಯ ವಿವಿಧ ವಲಯಗಳಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಹೆಚ್ಚುವುದನ್ನು ಗಮನಿಸಬಹುದಾಗಿದೆ. ಈ ಬದಲಾವಣೆ ಹೇಗೆ ಸಾಮಾಜಿಕ ಹಾಗೂ ಆರ್ಥಿಕ ನೆಲೆಯಲ್ಲಿ ಬದಲಾವಣೆಯನ್ನು ತಂದಿದೆ ಎಂದು ಈ ಅಧ್ಯಯನದ ಮೂಲಕ ತಿಳಿಯಲು ಪ್ರಯತ್ನಿಸಲಾಗಿದೆ.

### ೩.೩ ಕರ್ನಾಟಕದ ಮುಂಡಾಲ ಸಮುದಾಯದ ಜನಗಣತಿಯ ವರದಿ-೨೦೦೧

೨೦೦೧ಜನಗಣತಿಯ ವರದಿಯ ಪ್ರಕಾರ ಮುಂಡಾಲ ಸಮುದಾಯದ ಅಂಕಿ ಅಂಶಗಳ ವಿಶ್ಲೇಷಣೆ ಈ ರೀತಿಯಾಗಿದೆ. ( ಕೋಷ್ಟಕ )ಕರ್ನಾಟಕದಲ್ಲಿ ಮುಂಡಾಲ ಸಮುದಾಯದ ಒಟ್ಟು ಜನಸಂಖ್ಯೆ ೨೫,೮೪೨. ಗ್ರಾಮೀಣ ಪ್ರದೇಶದ ಜನಸಂಖ್ಯೆ ೧೪,೮೬೫ ಹಾಗೂ ನಗರ ಪ್ರದೇಶದಲ್ಲಿ ೧೦,೯೭೭ ಜನಸಂಖ್ಯೆಯಿದೆ. ಒಟ್ಟು ಪುರುಷರ ಸಂಖ್ಯೆ ೧೨,೬೦೭ ಹಾಗೂ ೧೩,೨೩೫ ರಷ್ಟು ಮಹಿಳೆಯರಿದ್ದಾರೆ. ಒಟ್ಟು ಅಕ್ಷರಸ್ಥರು ೧೭,೭೨೨ ಅದರಲ್ಲಿ ೯,೫೧೧ ಪುರುಷರು ಹಾಗೂ ೮,೨೧೧ ಮಹಿಳಾ ಅಕ್ಷರಸ್ಥರಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಮಹಿಳಾ ಅಕ್ಷರಸ್ಥರ ಸಂಖ್ಯೆ ೪,೧೯೬ ಹಾಗೂ ಪುರುಷರ ಸಂಖ್ಯೆ ೫,೧೯೮. ಒಟ್ಟು ಕೆಲಸಗಾರರು ೧೩,೮೨೦, ಇದರಲ್ಲಿ ೭,೪೩೩ ಪುರುಷರೂ ಹಾಗೂ ೬,೩೮೭ ರಷ್ಟು ಮಹಿಳಾ ದುಡಿಮೆಗಾರರಿದ್ದಾರೆ. ಧೀರ್ಘಕಾಲಿಕ ಕೆಲಸಗಾರರ ಸಂಖ್ಯೆ ೧೨,೨೯೩, ಅವರಲ್ಲಿ ೬,೭೧೩ ಪುರುಷರೂ ಹಾಗೂ ೫,೫೮೦ ಮಹಿಳಾ ಕೆಲಸಗಾರರಿದ್ದಾರೆ. ಒಟ್ಟು ಧೀರ್ಘಕಾಲಿಕ ಕೆಲಸಗಾರರಲ್ಲಿ ೨೯೭ ಕೃಷಿಕರೂ, ೧೦೨೨ ಕೃಷಿ ಕಾರ್ಮಿಕರೂ, ೨,೩೨೬ ಗೃಹ ಉದ್ದಿಮೆಗಾರರೂ ಹಾಗೂ ೮,೬೪೮ ರಷ್ಟು ಜನರು ಇತರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ.

ಧೀರ್ಘಕಾಲಿಕ ಕೃಷಿಕರಲ್ಲಿ ೨೧೫ ಪುರುಷರೂ ಹಾಗೂ ೮೨ ಮಹಿಳೆಯರಿದ್ದಾರೆ. ಕೃಷಿ ಕಾರ್ಮಿಕರಾಗಿ ೫೨೭ ಪುರುಷರೂ ಹಾಗೂ ೪೯೫ ಮಹಿಳಾ ಕೃಷಿ ಕಾರ್ಮಿಕರಿದ್ದಾರೆ. ಅರೆ ಕಾಲಿಕ ಕೆಲಸಗಾರರ ಒಟ್ಟು ಸಂಖ್ಯೆ ೧,೫೨೭ ಅವರಲ್ಲಿ ೭೨೦ ಪುರುಷರು ಹಾಗೂ ೮೦೭ ಮಹಿಳೆಯರು. ಅರೆ ಕಾಲಿಕ ಕೃಷಿ ಕಾರ್ಮಿಕರ ಸಂಖ್ಯೆ ೪೫೪ ಅವರಲ್ಲಿ ೧೪೦ ಪುರುಷರೂ ಹಾಗೂ ೩೧೪ ಮಹಿಳೆಯರಿದ್ದಾರೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ಮುಂಡಾಲ ಸಮುದಾಯದ ಮಹಿಳೆಯರು ಕೃಷಿ ಅವಲಂಬಿತ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಒಟ್ಟು ಅವಲಂಬಿತರ ಸಂಖ್ಯೆ ೧೨,೦೨೨ ಅವರಲ್ಲಿ ೫,೧೭೪ ಪುರುಷರೂ ಹಾಗೂ ೬,೮೪೮ ಮಹಿಳೆಯರಿದ್ದಾರೆ. ಈ ಅಂಕಿ ಅಂಶಗಳನ್ನು ವಿಶ್ಲೇಷಿಸಿದಾಗ ಮುಂಡಾಲ ಸಮುದಾಯದ ಮಹಿಳೆಯರ ಒಟ್ಟು ಜನಸಂಖ್ಯೆಯು ಹಾಗೂ ಸಾಕ್ಷರತೆಯ ಪ್ರಮಾಣವು ಪುರುಷರಿಗಿಂತ ಕಡಿಮೆಯಿದೆ. ಆದರೆ ಕೃಷಿ ಕೂಲಿಕಾರ್ಮಿಕರಾಗಿ ಹೆಚ್ಚಿನ ಸಂಖ್ಯೆಯಲ್ಲಿ ದುಡಿಯುತ್ತಿದ್ದಾರೆ.

## ಕೋಷ್ಟಕ ೩.೩.೧ ಕರ್ನಾಟಕದ ಮುಂಡಾಲ ಸಮುದಾಯದ ಅಂಕಿ ಅಂಶ–೨೦೦೧

| | | | | ಗ್ರಾಮೀಣ | | | ನಗರ | | |
|---|---|---|---|---|---|---|---|---|---|
| | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| ಜನಸಂಖ್ಯೆ | 25,842 | 12,607 | 13,235 | 14,865 | 7,311 | 7,554 | 10,977 | 5,296 | 5,681 |
| ಮಕ್ಕಳು(೦–೬ ವರ್ಷ) | 2,569 | 1,308 | 1,261 | 1,553 | 801 | 752 | 1,016 | 507 | 509 |
| ಅಕ್ಷರಸ್ಥರು | 17,722 | 9,511 | 8,211 | 9,394 | 5,198 | 4,196 | 8,328 | 4,313 | 4,015 |
| ಒಟ್ಟು ಕೆಲಸಗಾರರು | 13,820 | 7,433 | 6,387 | 8,361 | 4,415 | 3,946 | 5,459 | 3,018 | 2,441 |
| ಧೀರ್ಘಕಾಲಿಕ ಕೆಲಸಗಾರರು | 12,293 | 6,713 | 5,580 | 7,266 | 3,949 | 3,317 | 5,027 | 2,764 | 2,263 |
| ೧.ಕೃಷಿಕರು | 297 | 215 | 82 | 281 | 205 | 76 | 16 | 10 | 6 |
| ೨.ಕೃಷಿ ಕಾರ್ಮಿಕರು | 1,022 | 527 | 495 | 871 | 458 | 413 | 151 | 69 | 82 |
| ೩.ಗೃಹ ಉದ್ದಿಮೆಗಾರರು | 2,326 | 64 | 2,262 | 1,262 | 29 | 1,233 | 1,064 | 35 | 1,029 |
| ೪.ಇತರೆ | 8,648 | 5,907 | 2,741 | 4,852 | 3,257 | 1,595 | 3,796 | 2,650 | 1,146 |
| ಅಲ್ಪಕಾಲಿಕ ಕೆಲಸಗಾರರು | 1,527 | 720 | 807 | 1,095 | 466 | 629 | 432 | 254 | 178 |
| ೧.ಕೃಷಿಕರು | 47 | 13 | 34 | 47 | 13 | 34 | - | - | - |
| ೨.ಕೃಷಿ ಕಾರ್ಮಿಕರು | 454 | 140 | 314 | 421 | 134 | 287 | 33 | 6 | 27 |
| ೩.ಗೃಹ ಉದ್ದಿಮೆಗಾರರು | 208 | 7 | 201 | 141 | 6 | 135 | 67 | 1 | 66 |
| ೪.ಇತರೆ | 818 | 560 | 258 | 486 | 313 | 173 | 332 | 247 | 85 |
| ಅವಲಂಬಿತರು | 12,022 | 5,174 | 6,848 | 6,504 | 2,896 | 3,608 | 5,518 | 2,278 | 3,240 |

*A-10 State primary census abstract for individual scheduled caste-2001

## ಉಲ್ಲೇಖಗಳು

* ಜಿಲ್ಲಾ ಮಾನವ ಅಭಿವೃದ್ಧಿ ಮಾಹಿತಿ, ಉಡುಪಿ, ಕರ್ನಾಟಕ ೨೦೦೮

* ಪಿ.ಕಮಲಾಕ್ಷ ,'ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ', ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪,

* ಜನಗಣತಿ ವರದಿ ೨೦೦೧

* ಮಂಜೇಶ್ವರ ಗಣಪತಿ ರಾವ್ ಐಗಳ್, 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ', ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ,೧೯೨೩

# ಅಧ್ಯಾಯ ೪

# ಕ್ಷೇತ್ರ ಕಾರ್ಯಾಧಾರಿತ ಮಾಹಿತಿ ವಿಶ್ಲೇಷಣೆ

# ಅಧ್ಯಾಯ ೪

# ಕ್ಷೇತ್ರಾಧಾರಿತ ಮಾಹಿತಿ ವಿಶ್ಲೇಷಣೆ

ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಣೆಯನ್ನು ಉಡುಪಿ ತಾಲೂಕಿನಲ್ಲಿ ನಡೆಸಲಾಗಿದೆ. ಅಂಕಿ ಅಂಶಗಳಲ್ಲಿ ನಿಖರತೆಯನ್ನು ಪಡೆಯುವ ಉದ್ದೇಶದಿಂದ ಕ್ಷೇತ್ರ ಕಾರ್ಯವನ್ನು ತಾಲೂಕಿನ ಮೂರು ಗ್ರಾಮಗಳಲ್ಲಿ ನಡೆಸಲಾಯಿತು. ತೆಂಕನಿಡಿಯೂರು(೩೦), ಮಲ್ಪೆ(೩೦) ಹಾಗೂ ವಾರಂಬಳ್ಳಿ(೩೦) ಪಂಚಾಯತ್ ವ್ಯಾಪ್ತಿಯ ಪರಿಶಿಷ್ಟ ಜಾತಿಯ ಕಾಲೊನಿಯ ಒಟ್ಟು ೧೦೫ ಮಹಿಳೆಯರನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಂಕಿ ಅಂಶಗಳ ವಿಶ್ಲೇಷಣೆಯನ್ನು ನಾಲ್ಕು ವಿಭಾಗಗಳಲ್ಲಿ ನಡೆಸಲಾಗಿದೆ.

೧. ಮೊದಲನೇ ವಿಭಾಗದಲ್ಲಿ ಮಾಹಿತಿದಾರರ ಸಾಮಾನ್ಯ ವಿವರಗಳನ್ನು ವಿಶ್ಲೇಷಣೆ ಮಾಡಲಾಗಿದೆ,

೨. ಎರಡನೇ ವಿಭಾಗದಲ್ಲಿ ಮುಂಡಾಲ ಮಹಿಳೆಯರ ಸಾಮಾಜಿಕ ಸ್ಥಿತಿ ಗತಿಗಳ ಬಗ್ಗೆ ವಿವರಿಸಲಾಗಿದೆ.

೩. ಮೂರನೇ ವಿಭಾಗದಲ್ಲಿ ಮಹಿಳೆಯರ ಆರ್ಥಿಕ ಸ್ವಾವಲಂಬನೆಯ ಬಗ್ಗೆ ವಿಶ್ಲೇಷಿಸಲಾಗಿದೆ

೪. ನಾಲ್ಕನೆಯ ವಿಭಾಗದಲ್ಲಿ ಮಹಿಳಾ ಸಬಲೀಕರಣದ ನೆಲೆಯಲ್ಲಿ ಮುಂಡಾಲ ಸಮುದಾಯದ ಮಹಿಳೆಯರ ಬಗ್ಗೆ ವಿವರಿಸಲಾಗಿದೆ.

## ೧. ಮಾಹಿತಿದಾರರ ಸಾಮಾನ್ಯ ವಿವರಗಳು

**ರೇಖಾಚಿತ್ರ ೪.೧.೧ ಮಾಹಿತಿದಾರರ ವಯೋಮಾನದ ವರ್ಗೀಕರಣ**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲ್ಕಂಡ ಅಂಕಿ ಅಂಶಗಳು ಮಾಹಿತಿದಾರರ ವಯೋಮಾನದ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೩೩ ರಷ್ಟು ಮುಂಡಾಲ ಮಹಿಳೆಯರು ೩೧-೪೦ ವರ್ಷದವರು, ಶೇಕಡಾ ೨೬ ರಷ್ಟು ಮಹಿಳೆಯರು ೪೧-೫೦ ವರ್ಷದವರು, ೨೩% ದಷ್ಟು ಮಹಿಳೆಯರು ೨೧-೩೦ ವಯೋಮಾನದವರು, ಹಾಗೂ ಶೇಕಡಾ ೧೯ರಷ್ಟು ಮಹಿಳೆಯರು ೫೧ ರಿಂದ ೬೦ ರ ವಯೋಮಾನದ ಗುಂಪಿಗೆ ಸೇರಿದವರಾಗಿರುತ್ತಾರೆ.

**ಮಾಹಿತಿದಾರರ ಶೈಕ್ಷಣಿಕ ವಿವರ:**

ಶಿಕ್ಷಣಕ್ಕೂ ಮಹಿಳೆಯರನ್ನು ಕುರಿತ ಸಾಮಾಜಿಕ ನಿಲುವುಗಳಿಗೆ ಅತ್ಯಂತ ನಿಕಟವಾದ ಸಂಬಂಧವಿದೆ. ಬಹುಕಾಲದಿಂದ ಮಹಿಳೆಯರಿಗೆ ಸಂಬಂಧಿಸಿದ ಕ್ರಿಯಾತ್ಮಕ ಮತ್ತು ನಕರಾತ್ಮಕ ಚಿಂತನೆಗಳೆರಡೂ ರೂಪಿತವಾಗಿರುವುದು ಶಿಕ್ಷಣ ಎಂಬ ಸಂಸ್ಥೆಯ ಮೂಲಕವೇ ಎಂದಾಗ ಈ ಸಂಸ್ಥೆ ಮಹಿಳೆಯರ ವಿಚಾರದಲ್ಲಿ ಸಾಮಾಜಿಕ ಬದಲಾವಣೆಯನ್ನು ತರುವಲ್ಲಿ ಎಂಥ ಮಹತ್ತರವಾದ ಪಾತ್ರವನ್ನು ವಹಿಸಬಹುದು ಎಂಬುದರ ಅರಿವು ನಮಗೆ ಉಂಟಾಗುತ್ತದೆ.

**ಕೋಷ್ಟಕ ೪.೧.೧ ಮಾಹಿತಿದಾರರ ಶೈಕ್ಷಣಿಕ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| ೧ | ಅನಕ್ಷರಸ್ಥರು | ೧೨ | ೧೧.೪೩% |
| ೨ | ಪ್ರಾಥಮಿಕ | ೩೯ | ೩೭.೧೪% |
| ೩ | ಪ್ರೌಡಶಾಲೆ | ೨೪ | ೨೨.೮೬% |
| ೪ | ಪಿ.ಯು.ಸಿ | ೨೦ | ೧೯.೦೫% |
| ೫ | ಪದವಿ | ೫ | ೪.೭೬% |
| ೬ | ಉನ್ನತ ಶಿಕ್ಷಣ | ೫ | ೪.೭೬% |
| | **ಒಟ್ಟು** | **೧೦೫** | **೧೦೦%** |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲ್ಕಂಡ ಕೋಷ್ಟಕದಲ್ಲಿರುವಂತೆ ೩೭.೧೪%ದಷ್ಟು ಮುಂಡಾಲ ಮಹಿಳೆಯರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡಿರುತ್ತಾರೆ. ಶೇಕಡಾ ೨೨.೮೬ ರಷ್ಟು ಮಹಿಳೆಯರು ಪ್ರೌಢಶಾಲಾ ಶಿಕ್ಷಣವನ್ನೂ, ೧೯.೦೫% ದಷ್ಟು ಮಹಿಳೆಯರು ಪದವಿ ಪೂರ್ವ ಶಿಕ್ಷಣವನ್ನೂ ಹಾಗೂ ೪.೭೬% ದಷ್ಟು ಮಹಿಳೆಯರು ಪದವಿಯನ್ನು ಮುಗಿಸಿರುತ್ತಾರೆ. ೧೧.೪೩% ದಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು ಕೇವಲ ೪.೭೬% ದಷ್ಟು ಮಾಹಿತಿದಾರರು ಉನ್ನತ ಶಿಕ್ಷಣವನ್ನು ಪಡೆದುಕೊಂಡಿರುತ್ತಾರೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಮುಂಡಾಲ ಸಮುದಾಯದ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದಿರುತ್ತಾರೆ. ಹಾಗೆಯೇ ಒಟ್ಟು ಮಾಹಿತಿದಾರರಲ್ಲಿ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗಿದೆ. ಪರಿಶಿಷ್ಟ ಜಾತಿಯ ಅಭಿವೃದ್ಧಿಗಾಗಿ ಅನೇಕ ಶೈಕ್ಷಣಿಕ ಮೀಸಲಾತಿಗಳಿದ್ದರೂ ಪದವಿ ಮತ್ತು ಉನ್ನತ ಶಿಕ್ಷಣ ಪಡೆದ ಮಹಿಳೆಯರ ಸಂಖ್ಯೆಯು ಇಲ್ಲಿ ಕಡಿಮೆ ಇದೆ.

**ಕೋಷ್ಟಕ ೪.೧.೨ ಮಾಹಿತಿದಾರರ ವೈವಾಹಿಕ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| ೧ | ವಿವಾಹಿತೆ | ೬೬ | ೬೨.೮೬% |
| ೨ | ಅವಿವಾಹಿತೆ | ೨೧ | ೨೦.೯೫% |
| ೩ | ವಿಧವೆ | ೧೧ | ೧೦.೪೮% |
| ೪ | ವಿಚ್ಛೇದಿತೆ/ | ೬ | ೫.೭೧% |
| | **ಒಟ್ಟು** | **೧೦೫** | **೧೦೦%** |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲ್ಕಂಡ ಅಂಕಿ ಅಂಶಗಳನ್ನು ಗಮನಿಸಿದಾಗ ಪ್ರಸ್ತುತ ಅಧ್ಯಯನಕ್ಕೆ ಸೂಕ್ತವಾಗುವಂತೆ ವೈವಾಹಿಕ ವರ್ಗೀಕರಣದಲ್ಲಿ ಎಲ್ಲಾ ವಿಧದ ಮಹಿಳೆಯರನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ. ಒಟ್ಟು ಮಾಹಿತಿದಾರರಲ್ಲಿ ೬೨.೮೬% ದಷ್ಟು ಮಹಿಳೆಯರು ವಿವಾಹಿತರಾಗಿರುತ್ತಾರೆ. ೨೦.೯೫% ದಷ್ಟು ಮಹಿಳೆಯರು ಅವಿವಾಹಿತರು ಹಾಗೂ ೧೦.೪೮% ದಷ್ಟು ಮಹಿಳೆಯರು ವಿಧವೆಯರಿದ್ದಾರೆ. ಶೇಕಡಾ ೫.೭೧% ದಷ್ಟು ಮಹಿಳೆಯರು ವಿಚ್ಛೇದಿತರು ಮತ್ತು ಕೌಟುಂಬಿಕ ಕಲಹದಿಂದಾಗಿ ತವರು ಮನೆಯಲ್ಲಿರುವ ಮಹಿಳೆಯರಿದ್ದಾರೆ. ಒಟ್ಟು ಮಾಹಿತಿದಾರರಲ್ಲಿ ವಿವಾಹಿತ ಮಹಿಳೆಯರು ಹೆಚ್ಚಿನ(೬೨.೮೯%) ಸಂಖ್ಯೆಯಲ್ಲಿರುವುದು ಗಮನಿಸಬಹುದು.

**ರೇಖಾಚಿತ್ರ ೪.೧.೨ ಕುಟುಂಬದ ವಿಧ**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮುಂಡಾಲ ಸಮುದಾಯದ ಕುಂಟುಬಗಳು ಮಾತೃ ಪ್ರಧಾನ ಕುಟುಂಬಗಳಾಗಿದ್ದು, ಅಳಿಯಕಟ್ಟು ಪದ್ಧತೆಯನ್ನು ಪಾಲಿಸುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ೮೩% ದಷ್ಟು ಮಾಹಿತಿದಾರರ ವಿಭಕ್ತ ಕುಟುಂಬಗಳು ಹಾಗೂ ಶೇಕಡಾ ೧೭ ರಷ್ಟು ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ನೋಡಬಹುದು. ಬದಲಾಗುತ್ತಿರುವ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅವಿಭಕ್ತ ಕುಟುಂಬಗಳು ತಮ್ಮ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಿವೆ. ಈ ನಿಟ್ಟಿನಲ್ಲಿ ಮುಂಡಾಲ ಸಮುದಾಯದಲ್ಲೂ ವಿಭಕ್ತ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಗಮನಿಸಬಹುದು.

### ಮಾಹಿತಿದಾರರ ಕುಟುಂಬದ ಸದಸ್ಯರ ಶೈಕ್ಷಣಿಕ ವಿವರ

ಈ ಕೆಳಗೆ ಮಾಹಿತಿದಾರರ ಕುಟುಂಬದ ಸದಸ್ಯರ ಶೈಕ್ಷಣಿಕ ವಿವರಗಳನ್ನು ನೀಡಲಾಗಿದೆ. ಶೈಕ್ಷಣಿಕ ವಿವರಗಳನ್ನು ವಯಸ್ಕರ ಹಾಗೂ ಪ್ರಸ್ತುತ ಶಿಕ್ಷಣ ಪಡೆಯುತ್ತಿರುವ ವಿಧ್ಯಾರ್ಥಿಗಳು ಎಂಬ ಎರಡು ವಿಭಾಗಗಳಲ್ಲಿ ವಿಶ್ಲೇಷಿಸಲಾಗುವುದು.

**ಕೋಷ್ಟಕ ೪.೧.೩ ವಯಸ್ಕರ ಶೈಕ್ಷಣಿಕ ವಿವರಗಳು**

| ಕ್ರ.ಸ | ವರ್ಗೀಕರಣ | ಪುರುಷರು | | ಮಹಿಳೆಯರು | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡವಾರು | ಸಂಖ್ಯೆ | ಶೇಕಡವಾರು | ಸಂಖ್ಯೆ | ಶೇಕಡವಾರು |
| ೧ | ಅನಕ್ಷರಸ್ಥರು | ೨೫ | ೧೪.೬೨ | ೩೦ | ೨೪.೭೯ | ೫೫ | ೧೮.೮೪ |
| ೨ | ಪ್ರಾಥಮಿಕ | ೫೪ | ೩೧.೫೮ | ೨೦ | ೧೬.೫೩ | ೭೪ | ೨೫.೩೪ |
| ೩ | ಫ್ರೌಡಶಾಲೆ | ೪೬ | ೨೬.೯೦ | ೩೫ | ೨೮.೯೩ | ೮೧ | ೨೭.೭೪ |
| ೪ | ಪಿ.ಯು.ಸಿ | ೨೩ | ೧೩.೪೫ | ೨೬ | ೨೧.೪೯ | ೪೯ | ೧೬.೭೮ |
| ೫ | ಪದವಿ | ೨೦ | ೧೧.೭೦ | ೮ | ೬.೬೧ | ೨೮ | ೯.೫೯ |
| ೬ | ಉನ್ನತ ಶಿಕ್ಷಣ | ೩ | ೧.೭೫ | ೨ | ೧.೬೫ | ೫ | ೧.೭೧ |
| | **ಒಟ್ಟು** | **೧೭೧** | **೧೦೦%** | **೧೨೧** | **೧೦೦%** | **೨೯೨** | **೧೦೦%** |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಕೋಷ್ಟಕದಲ್ಲಿ ಉಲ್ಲೇಖಿಸಿರುವಂತೆ ೨೭.೭೪% ದಷ್ಟು ಮಾಹಿತಿದಾರರ ಕುಟುಂಬ ಸದಸ್ಯರು ತಮ್ಮ ಫ್ರೌಡಶಾಲಾ ಶಿಕ್ಷಣವನ್ನೂ ಹಾಗೂ ೨೫.೩೪% ದಷ್ಟು ಕುಟುಂಬ ಸದಸ್ಯರು ಪ್ರಾಥಮಿಕ ಶಿಕ್ಷಣವನ್ನು ಪಡೆದಿರುತ್ತಾರೆ. ೧೮.೮೪%ದಷ್ಟು ಸದಸ್ಯರು ಅನಕ್ಷರಸ್ಥರಾಗಿದ್ದು ಅವರಲ್ಲಿ ೧೪.೬೨% ಪುರುಷರೂ ಹಾಗೂ ೨೪.೭೯% ದಷ್ಟು ಮಹಿಳೆಯರಿದ್ದಾರೆ. ೧೬.೭೮% ದಷ್ಟು ಸದಸ್ಯರು ಪದವಿ ಪೂರ್ವ ಶಿಕ್ಷಣವನ್ನು ಪಡೆದಿರುತ್ತಾರೆ, ಅವರಲ್ಲಿ ೧೩.೪೫% ಪುರುಷರೂ ಹಾಗೂ ೨೧.೪೯% ದಷ್ಟು ಮಹಿಳೆಯರಿದ್ದಾರೆ. ಉನ್ನತ ಶಿಕ್ಷಣ ಪಡೆದಿರುವಂತಹ ಪುರುಷರು ೧.೭೫%ರಷ್ಟಿದ್ದರೆ, ಶೇಕಡಾ ೧.೬೫ ಮಹಿಳೆಯರಿದ್ದಾರೆ. ಎಲ್ಲಾ ಅಂಕಿ ಅಂಶಗಳನ್ನು

ಗಮನಿಸಿದಾಗ ಮುಂಡಾಲ ಸಮುದಾಯದಲ್ಲಿ ಮಹಿಳಾ ಅನಕ್ಷರಸ್ಥರ ಸಂಖ್ಯೆಯು ಜಾಸ್ತಿಯಿದೆ. ಹಾಗೆಯೇ ಪದವಿ ಹಾಗೂ ಉನ್ನತ ಶಿಕ್ಷಣವನ್ನು ಪಡೆದುಕೊಂಡಿರುವವರ ಸಂಖ್ಯೆ ಇವರಲ್ಲಿ ಕಡಿಮೆಯಿದೆ.

**ಕೋಷ್ಟಕ ೪.೧.೪ ಪ್ರಸ್ತುತ ಶಿಕ್ಷಣ ಪಡೆಯುತ್ತಿರುವ ವಿಧ್ಯಾರ್ಥಿಗಳ ಶೈಕ್ಷಣಿಕ ವಿವರ**

| ಕ್ರ.ಸ | ವರ್ಗೀಕರಣ | ವಿಧ್ಯಾರ್ಥಿಗಳು | | ವಿಧ್ಯಾರ್ಥಿನಿಯರು | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಶೇಕಡವಾರು | ಸಂಖ್ಯೆ | ಶೇಕಡವಾರು | ಸಂಖ್ಯೆ | ಶೇಕಡವಾರು |
| ೧ | ಪ್ರಾಥಮಿಕ | ೧೮ | ೫೨.೯೪ | ೧೨ | ೩೪.೨೯ | ೩೦ | ೪೩.೪೮ |
| ೨ | ಪ್ರೌಢಶಾಲೆ | ೫ | ೧೪.೭೧ | ೬ | ೧೭.೧೪ | ೧೧ | ೧೫.೯೪ |
| ೩ | ಪಿ.ಯು.ಸಿ | ೭ | ೨೦.೫೯ | ೭ | ೨೦.೦೦ | ೧೪ | ೨೦.೨೯ |
| ೪ | ಪದವಿ | ೪ | ೧೧.೭೬ | ೯ | ೨೫.೭೧ | ೧೩ | ೧೮.೮೪ |
| ೫ | ಉನ್ನತ ಶಿಕ್ಷಣ | – | – | – | – | – | – |
| ೬ | ಡಿ.ಎಡ್ | – | – | ೧ | ೨.೮೬ | ೧ | ೧.೪೫ |
| | ಒಟ್ಟು | ೩೪ | ೧೦೦% | ೩೫ | ೧೦೦% | ೬೯ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಪ್ರಸ್ತುತ ಶಿಕ್ಷಣವನ್ನು ಪಡೆಯುತ್ತಿರುವ ಒಟ್ಟು ವಿಧ್ಯಾರ್ಥಿಗಳ ಸಂಖ್ಯೆ ೬೯ ಅವರಲ್ಲಿ ೪೩.೪೮% ದಷ್ಟು ವಿಧ್ಯಾರ್ಥಿಗಳು ಪಾಥಮಿಕ ತರಗತಿಗಳಲ್ಲಿ ವಿಧ್ಯಾಭ್ಯಾಸ ಮಾಡುತ್ತಿದ್ದಾರೆ, ಉಳಿದಂತೆ ೨೦.೨೯% ದಷ್ಟು ವಿಧ್ಯಾರ್ಥಿಗಳು ಪದವಿ ಪೂರ್ವ ಹಾಗೂ ೧೮.೮೪% ದಷ್ಟು ಪದವಿ ತರಗತಿಗಳಲ್ಲಿದ್ದಾರೆ. ೧೫.೯೪% ದಷ್ಟು ವಿಧ್ಯಾರ್ಥಿಗಳು ಫ್ರೌಡಶಾಲೆಗಳಲ್ಲೂ ಹಾಗೂ ೧.೪೫% ದಷ್ಟು ವಿಧ್ಯಾರ್ಥಿನಿಯರು ಶಿಕ್ಷಕ ತರಬೇತಿಯನ್ನು ಪಡೆಯುತ್ತಿದ್ದಾರೆ.

ಇಲ್ಲಿರುವ ಅಂಕಿ ಅಂಶಗಳನ್ನು ಗಮನಿಸಿದಾಗ ಉನ್ನತ ಶಿಕ್ಷಣವನ್ನು ಪಡೆಯುವ ವಿಧ್ಯಾರ್ಥಿಗಳೇ ಇಲ್ಲವಾಗಿದೆ. ಹೆಚ್ಚಾಗಿ ಈ ಸಮುದಾಯದಲ್ಲಿ ಪದವಿ ತರಗತಿಗಳ ನಂತರ ಉನ್ನತ ಶಿಕ್ಷಣದ ಕಡೆಗೆ ಒಲವು ತೋರುವವರ ಸಂಖ್ಯೆಯು ತೀರಾ ಕಡಿಮೆಯಿದೆ.

**ಮಾಹಿತಿದಾರರ ಕುಟುಂಬ ಸದಸ್ಯರ ಉದ್ಯೋಗ:**

ಯಾವುದೇ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ ನಡೆಸುವಾಗ ಮಾಹಿತಿದಾರರದ ಕುಟುಂಬದ ಸದಸ್ಯರ ದುಡಿಮೆಯ ಬಗ್ಗೆ ತಿಳಿದುಕೊಳ್ಳುವುದು ಅತೀ ಅವಶ್ಯಕ. ಈ ನಿಟ್ಟಿನಲ್ಲಿ ಮಾಹಿತಿದಾರರ ಕುಟುಂಬದ ಇತರ ಸದಸ್ಯರ ಉದ್ಯೋಗದ ಮಾಹಿತಿ ಈ ಕೆಳಗಿನಂತಿದೆ.

**ಕೋಷ್ಟಕ ೪.೧.೫ ಮಾಹಿತಿದಾರರ ಕುಟುಂಬ ಸದಸ್ಯರ ಉದ್ಯೋಗದ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ಕೂಲಿ | ೧೧೨ | ೩೦.೧೯ |
| ೨ | ಬೀಡಿ ಕಟ್ಟುವುದು | ೧೨ | ೩.೨೩ |
| ೩ | ಕೃಷಿ ಕಾರ್ಮಿಕರು | ೩ | ೦.೮೧ |
| ೪ | ಸರಕಾರಿ ನೌಕರರು | ೧೮ | ೪.೮೫ |
| ೫ | ಖಾಸಗಿ ವಲಯದ ಉದ್ಯೋಗ | ೪೮ | ೧೨.೯೫ |
| ೬ | ಮನೆವಾರ್ತೆ | ೫೮ | ೧೫.೬೩ |
| ೭ | ಅವಲಂಬಿತರು | ೮೯ | ೨೩.೯೯ |
| ೮ | ಇತರೆ | ೩೧ | ೮.೬೨ |
| | ಒಟ್ಟು | ೩೭೧ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲ್ಕಂಡ ಅಂಕಿ ಅಂಶಗಳ ಆಧಾರದಲ್ಲಿ ಒಟ್ಟು ೩೭೧ ಕುಟುಂಬ ಸದಸ್ಯರಲ್ಲಿ ೩೦.೧೯% ದಷ್ಟು ದಿನಕೂಲಿ ಕೆಲಸಗಾರರಾಗಿದ್ದಾರೆ. ೨೩.೯೯% ದಷ್ಟು ಕುಟುಂಬದ ಸದಸ್ಯರು ಅವಲಂಬಿತರೂ, ೧೫.೬೩% ದಷ್ಟು ಮನೆವಾರ್ತೆಯ ಕುಟುಂಬ ಸದಸ್ಯರೂ ಹಾಗೂ ೧೨.೯೫% ದಷ್ಟು ಕುಟುಂಬದ ಸದಸ್ಯರು ವಿವಿಧ ಖಾಸಗಿ ವಲಯಗಳಲ್ಲಿ ದುಡಿಯುತ್ತಾರೆ. ೮.೬೨% ದಷ್ಟು ಜನರು ಇತರೆ ಉದ್ಯೋಗಗಳಲ್ಲೂ ಹಾಗೂ ೪.೮೫% ದಷ್ಟು ಜನರು ಸರಕಾರಿ ಕಚೇರಿಗಳಲ್ಲಿ ದುಡಿಯುತ್ತಿದ್ದಾರೆ. ಶೇಕಡಾ ೩.೨೩ ರಷ್ಟು ಜನರು ಬೀಡಿ ಉದ್ದಿಮೆಯನ್ನು ಅವಲಂಬಿಸಿದ್ದರೆ, ಕೇವಲ ೦.೮೧% ದಷ್ಟು ಕೌಟುಂಬದ ಸದಸ್ಯರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿರುತ್ತಿದ್ದಾರೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಂಡಾಲ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕುಟುಂಬ ಸದಸ್ಯರು ದಿನಕೂಲಿ ಕಾರ್ಮಿಕರಾಗಿದ್ದಾರೆ. ಅದೇ ರೀತಿ ಸರಕಾರಿ ಉದ್ಯೋಗಗಳಲ್ಲಿರುವ ಸದಸ್ಯರ ಶೇಕಡಾವಾರು ಸಂಖ್ಯೆಯು ಇಲ್ಲಿ ತೀರಾ ಕಡಿಮೆಯಿದೆ. ಅದೇ ರೀತಿ ಹೆಚ್ಚಿನ ಮುಂಡಾಲ ಸಮುದಾಯದ ಕುಟುಂಬಗಳು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಾಗಿದ್ದು, ಆರ್ಥಿಕವಾಗಿ ಹಿಂದುಳಿದಿದೆ ಎಂದು ತಿಳಿಯಬಹುದು.

## ೪.೨ ಮಾಹಿತಿದಾರರ ಸಾಮಾಜಿಕ ಸ್ಥಿತಿಗತಿಗಳು

ಕ್ಷೇತ್ರಕಾರ್ಯವನ್ನು ನಡೆಸಲಾದ ಮೂರು ಪ್ರದೇಶಗಳು ಪರಿಶಿಷ್ಟ ಜಾತಿ ಸಮುದಾಯದ ಕೊಲನಿಗಳಾಗಿದೆ. ಮುಂಡಾಲ ಸಮುದಾಯದ ಮಹಿಳೆಯರು ಬೇರೆ ಜಾತಿ ಸಮುದಾಯದ ಜನರೊಂದಿಗೆ ಬೆರೆಯುವುದು ಕಡಿಮೆ. ಆದರೂ ಮುಂಡಾಲ ಸಮುದಾಯದ ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಬೇರೆ ಜಾತಿಯವರಿಂದ ಅನುಭವಿಸಿರುತ್ತಾರೆ.

### ಜಾತಿ ತಾರತಮ್ಯವನ್ನು ಅನುಭವ

ಸಮಾಜ ಅದೆಷ್ಟೂ ಅಭಿವೃದ್ಧಿ ಹೊಂದಿದ್ದರೂ ಕೆಲವು ಸಾಮಾಜಿಕ ವ್ಯವಸ್ಥೆಗಳು ಮತ್ತು ಆಚರಣೆಗಳು ಸಮಾಜದಲ್ಲಿ ಇನ್ನೂ ಜೀವಂತವಾಗಿದೆ. ಸರಕಾರವು ಅನೇಕ ಸಂವಿಧಾನಿಕ ಕಾನೂನುಗಳನ್ನು, ಅಸ್ಪೃಶ್ಯತೆ ಮತ್ತು ಜಾತಿ ತಾರತಮ್ಯಗಳನ್ನು ತೊಡೆದುಹಾಕಲು ಅನುಷ್ಠಾನಗೊಳಿಸಿದೆ, ಆದರೂ ಸಮಾಜದಲ್ಲಿ ಜಾತಿ ತಾರತಮ್ಯದ ಕುರುಹುಗಳು ಇರುವುದನ್ನು ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಮುಂಡಾಲ ಸಮುದಾಯದ ಮಹಿಳೆಯರು ಎಷ್ಟರ ಮಟ್ಟಿಗೆ ಜಾತಿ ತಾರತಮ್ಯವನ್ನು ಅನುಭವಿಸಿರುತ್ತಾರೆ ಎಂಬುದನ್ನು ಈ ಕೆಳಗಿನ ಅಂಕಿ ಅಂಶಗಳಿಂದ ತಿಳಿಯಬಹುದು. ೫೬.೧೯% ದಷ್ಟು ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಅನುಭವಿಸಿಲ್ಲ ಎಂಬುದಾಗಿ ತಿಳಿಸಿರುತ್ತಾರೆ. ಹಾಗೆಯೇ ೪೩.೮% ದಷ್ಟು ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಅನುಭವಿಸಿರುವ ಬಗ್ಗೆ ವಿವರಿಸಿದ್ದಾರೆ.

**ಕೋಷ್ಟಕ ೪.೨.೧ ಜಾತಿ ತಾರತಮ್ಯದ ವಿಧ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ಉದ್ಯೋಗದ ಸ್ಥಳಗಳಲ್ಲಿ | ೧೯ | ೪೧.೩೦ |
| ೨ | ಹಿರಿಯರಿಗೆ ಏಕವಚನದಲ್ಲಿ ಸಂಭೋದನೆ | ೧೩ | ೨೮.೨೬ |
| ೩ | ಮನೆಯೊಳಗೆ ಪ್ರವೇಶ ನಿಷೇದ | ೧೦ | ೨೧.೭೪ |
| ೪ | ಆಹಾರಕ್ಕೆ ಪ್ರತ್ಯೇಕ ತಟ್ಟೆ/ಪಂಕ್ತಿ | ೪ | ೮.೭೦ |
| | **ಒಟ್ಟು** | **೪೬** | **೧೦೦%** |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಜಾತಿ ತಾರತಮ್ಯ ಕೇವಲ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರವಲ್ಲ, ನಗರ ಪ್ರದೇಶಗಳಲ್ಲೂ ಹಾಗೂ ಕೆಲಸ ಮಾಡುವ ಕಚೇರಿಗಳಲ್ಲೂ ಇದರ ಅಸ್ಥಿತ್ವವನ್ನು ಕಾಣಬಹುದು. ಆದರೆ ಇದರ ಸ್ವರೂಪ ಬೇರೆ ಬೇರೆ ರೀತಿಯದ್ದಾಗಿರುತ್ತದೆ. ಅಧ್ಯಯನಕ್ಕಾಗಿ ನಡೆಸಲಾದ ಕ್ಷೇತ್ರಕಾರ್ಯದಲ್ಲಿ ಒಟ್ಟು ೪೩.೮% ದಷ್ಟು ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಅನುಭವಿಸಿರುತ್ತಾರೆ. ೪೧.೩೦% ದಷ್ಟು ಮಹಿಳೆಯರು ಉದ್ಯೋಗದ ಸ್ಥಳಗಳಲ್ಲೂ, ೨೮.೨೬% ದಷ್ಟು ಮಹಿಳೆಯರ ಅಭಿಪ್ರಾಯದಂತೆ ಇತರೆ ಜಾತಿಯ ಜನರಿಂದ ಸಮುದಾಯದ ಹಿರಿಯರಿಗೆ ಏಕವಚನದಲ್ಲಿ ಸಂಭೋದನೆ ಇವು ಜಾತಿ ತಾರತಮ್ಯದ ವಿಧಗಳಾದರೆ, ೨೧.೭೪% ಶೇಕಡಾದಷ್ಟು ಮಹಿಳೆಯರಿಗೆ ಇತರ ಜಾತಿಯ ಮನೆಗಳಿಗೆ ಪ್ರವೇಶ ನಿಷಿದ್ದವಾಗಿದೆ. ಹಾಗೂ ೮.೭೦% ದಷ್ಟು ಮಹಿಳೆಯರ ಪ್ರಕಾರ ಆಹಾರಕ್ಕೆ ಪ್ರತ್ಯೇಕ ತಟ್ಟೆ/ ಪಂಕ್ತಿ ಮಾಡಿರುವಂತಹದು ಜಾತಿ ಆಧಾರಿತ ತಾರತಮ್ಯ ಎನ್ನುವುದು ಅವರ ಅಭಿಪ್ರಾಯ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತಾವು ಕೆಲಸ ಮಾಡುವ ಸ್ಥಳಗಳಲ್ಲಿ ಜಾತಿ ತಾರತಮ್ಯಗಳನ್ನು ಅನುಭವಿಸಿರುತ್ತಾರೆ, ಉದಾಹರಣೆಗೆ ಕೆಲಸದ ವೇಳೆಯಲ್ಲೂ ಜಾತಿ ಆಧಾರಿತ ಮಾತುಕತೆ, ತದನಂತರ ಮೀಸಲಾತಿಯ ಕುರಿತಂತೆ ಪರಿಶಿಷ್ಟ ಜಾತಿ ಸಮುದಾಯದವರಿಗೆ ಯಾವುದೇ ಸ್ಪರ್ಧೆಗಳಿಲ್ಲದೇ ಹೆಚ್ಚಿನ ಸಂಖ್ಯೆಯಲ್ಲಿ ಸರಕಾರಿ ಕೆಲಸಗಳು ಸಿಗುತ್ತವೆ ಎಂಬ ವಿಷಯದ ಬಗ್ಗೆ ಅಸಮದಾನವನ್ನು ತೋರಿಸುವಂತಹದು. ಇಲ್ಲಿ ನೈಜವಾಗಿಯೂ ಪ್ರಯತ್ನ ಪಟ್ಟಂತಹ ಅಭ್ಯರ್ಥಿಗೂ ಮನ್ನಣೆ ಇರುವುದಿಲ್ಲ, ಎಲ್ಲಾ ಅಭಿವೃದ್ಧಿಯನ್ನೂ ಜಾತಿ ಆದಾರದಲ್ಲೇ ಇತರ ಜಾತಿಯ ಜನರು ವಿಶ್ಲೇಷಿಸುತ್ತಾರೆ.

ಇನ್ನು ಎರಡನೇ ವಿಭಾಗದ ಜಾತಿ ತಾರತಮ್ಯದ ಬಗ್ಗೆ ಚರ್ಚಿಸುದಾದರೆ, ಈ ರೀತಿಯ ತಾರತಮ್ಯವನ್ನು ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಹಿರಿಯರು ಅನುಭವಿಸಿರುತ್ತಾರೆ. ವಯಸ್ಸಿನಲ್ಲಿ ಹಿರಿಯರಾಗಿದ್ದರೂ ತಾವು ಕೆಲಸ ಮಾಡುವ ಇತರ ಜಾತಿಯ ಮನೆಯ ಸದಸ್ಯರು ತಮ್ಮನ್ನು ಹೆಸರಿನಿಂದ ಅಥವಾ ಏಕವಚನದಲ್ಲಿ ಸಂಭೋದಿಸುವಂತಹದು. ಈ ರೀತಿಯ ತಾರತಮ್ಯವನ್ನು ಮಾಹಿತಿದಾರರಲ್ಲಿ ಹೆಚ್ಚಾಗಿ ಕೂಲಿ ಕೆಲಸ ಮಾಡುವ ಮಹಿಳೆಯರು ಅನುಭವಿಸಿರುತ್ತಾರೆ. ಕ್ಷೇತ್ರಕಾರ್ಯವನ್ನು ನಡೆಸಲಾದ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿಯ ಮನೆಗಳೊಂದಿಗೆ ಬೇರೆ ಜಾತಿಯ ಜನರ ಮನೆಗಳೂ ಇವೆ. ಕೆಲವು ಜಾತಿಯ ಮನೆಗಳಿಗೆ ಸಮುದಾಯದ ಮಹಿಳೆಯರಿಗೆ ಪ್ರವೇಶವಿಲ್ಲ, ಮನೆಯ ಜಗಲಿಯಲ್ಲಿಯೇ ಕುಳಿತುಕೊಳ್ಳಬೇಕು ಆದುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರ ಅಭಿಪ್ರಾಯವೆಂದರೆ ಅವರು ಇತರೆ ಜಾತಿಯ ಮನೆಗಳ ಕಡೆ ಹೋಗುವುದೇ ಇಲ್ಲ. ಇವಿಷ್ಟೂ ಈಗಲೂ ಅಸ್ಥಿತ್ವದಲ್ಲಿರುವ ಹಾಗೂ ಸಮುದಾಯದ ಮಹಿಳೆಯರು ಅನುಭವಿಸಿರುವಂತಹ ಜಾತಿ ತಾರತಮ್ಯದ ಸ್ವರೂಪ.

**ಜಾತಿ ಮೀಸಲಾತಿಯ ಕುರಿತು ಅರಿವು:**

ಪರಿಶಿಷ್ಟ ಜಾತಿಯ ಮಹಿಳೆಯರಿಗೆ ವಿವಿಧ ಕ್ಷೇತ್ರಗಳಲ್ಲಿ ಮೀಸಲಾತಿಯಿರುವುದು ನಮಗೆಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಈ ಮೀಸಲಾತಿಯ ಬಗ್ಗೆ ಮುಂಡಾಲ ಸಮುದಾಯದ ಮಹಿಳೆಯರಿಗೆ ಎಷ್ಟರ ಮಟ್ಟಿಗೆ ಅರಿವಿದೆ ಎಂದು ಈ ಕೆಳಕಂಡ ವಿವರಣೆಯ ಮೂಲಕ ಗಮನಿಸಬಹುದು.

**ರೇಖಾಚಿತ್ರ ೪.೨.೧ ಜಾತಿ ಮೀಸಲಾತಿಯ ಕುರಿತು ಅರಿವು**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಒಟ್ಟು ಮಾಹಿತಿದಾರರಲ್ಲಿ ೫೬% ದಷ್ಟು ಮಹಿಳೆಯರಿಗೆ ಜಾತಿ ಮೀಸಲಾತಿ ಕುರಿತಾದ ಅರಿವು ಇದೆ. ಉಳಿದಂತೆ ೪೪% ದಷ್ಟು ಮಹಿಳೆಯರಿಗೆ ಮೀಸಲಾತಿಯ ಕುರಿತಂತೆ ಯಾವುದೇ ರೀತಿಯ ಮಾಹಿತಿಗಳಿಲ್ಲ. ತಮ್ಮ ಮಕ್ಕಳಿಗೆ ಶಾಲಾ ದಾಖಲಾತಿ ಸಂದರ್ಭದಲ್ಲಿ ಕಡಿಮೆ ಶುಲ್ಕ ಯಾಕೆ ಪಾವತಿಸಿದೆ? ಎಂಬ ಬಗ್ಗೆಯೂ ಅವರಿಗೆ ಮಾಹಿತಿಗಳಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸರಕಾರ ಮೀಸಲಾತಿಯನ್ನು ಅನುಷ್ಠಾನಗೊಳಿಸಿದ್ದರೂ ಅನೇಕ ಪರಿಶಿಷ್ಟ ಜಾತಿಯ ಮಹಿಳೆಯರಿಗೆ ಇದರ ಬಗ್ಗೆ ಅರಿವೇ ಇಲ್ಲದಂತಾಗಿದೆ.

**ವರದಕ್ಷಿಣೆ ಪದ್ಧತಿಯ ಬಗ್ಗೆ ವಿವರಣೆ**

ಮುಂಡಾಲ ಸಮುದಾಯದಲ್ಲಿ ವರದಕ್ಷಿಣೆ ಎನ್ನುವಂತಹ ಪದ್ಧತಿ ಇಲ್ಲ. ಈ ಸಮುದಾಯದಲ್ಲಿ ವಧುದಕ್ಷಿಣೆಯ ಸಂಪ್ರದಾಯವಿದೆ. ಹಿಂದಿನ ಕಾಲದಲ್ಲಿ ಮದುವೆಯ ಸಂದರ್ಭದಲ್ಲಿ ನಾಲ್ಕು ವರಹ ಹಣ(ರೂ.೧೬),ಕೈ ಬಳೆಯ ಖರ್ಚು ಒಂದು ರೂಪಾಯಿ, ವಧುವಿನ ದಾರಿ ಖರ್ಚು ಎಂದು ಒಟ್ಟು ರೂ.೧೬ ನ್ನು ವರನು ಕೊಡುವ ಪದ್ಧತಿ ಇತ್ತು. ಆದರೆ ಇದೀಗ ಬೇರೆ ಜಾತಿಯ ಸಂಪ್ರದಾಯಗಳ ಪ್ರಭಾವದಿಂದಾಗಿ ಮುಂಡಾಲ ಸಮುದಾಯದಲ್ಲೂ ವರದಕ್ಷಿಣೆ ಪದ್ಧತಿಯನ್ನು ಪಾಲಿಸುವುದನ್ನು ಕಾಣಬಹುದು.

**ಕೋಷ್ಟಕ ೪.೨.೨ ವರದಕ್ಷಿಣೆ ಕೊಟ್ಟಿರುವ ಬಗ್ಗೆ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ಹೌದು | ೨೮ | ೨೬.೬೬ |
| ೨ | ಇಲ್ಲ | ೫೬ | ೫೩.೩೩ |
| ೩ | ಅನ್ವಯಿಸುವುದಿಲ್ಲ | ೨೧ | ೨೦.೦೦ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ೨೬.೬೬% ದಷ್ಟು ಮಹಿಳೆಯರು ತಮ್ಮ ಮದುವೆಯ ಸಂದರ್ಭದಲ್ಲಿ ವರದಕ್ಷಣೆಯನ್ನು ಕೊಟ್ಟಿರುತ್ತಾರೆ. ಹಾಗೆಯೇ ೫೩.೩೩% ದಷ್ಟು ಮಹಿಳೆಯರು ಯಾವುದೇ ರೀತಿಯ ವರದಕ್ಷಿಣೆಯನ್ನು ಕೊಟ್ಟಿರುವುದಿಲ್ಲ. ಶೇಕಡಾ ೨೦ ರಷ್ಟು ಮಹಿಳೆಯರು ಅವಿವಾಹಿತರಾಗಿರುವುದರಿಂದ ಈ ಪ್ರಶ್ನೆ ಅವರಿಗೆ ಅನ್ವಯವಾಗುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಸ್ಥಾನಮಾನ ಹಾಗೂ ಆರ್ಥಿಕ ಸ್ಥಿತಿಗತಿಯನ್ನು ಹೊಂದಿಕೊಂಡು ಮುಂಡಾಲ ಸಮುದಾಯದಲ್ಲಿ ವರದಕ್ಷಿಣೆಯ ಮೊತ್ತವನ್ನು ನಿಗದಿಪಡಿಸಲಾಗುತ್ತದೆ.



**ಸರಕಾರಿ ಸವಲತ್ತುಗಳ ಬಗ್ಗೆ ಅರಿವು:**

ಆರ್ಥಿಕವಾಗಿ ಹಿಂದುಳಿದಿರುವ ಜಾತಿ ಸಮುದಾಯಗಳ ಅಭಿವೃದ್ಧಿಗಾಗಿ ಸರಕಾರವು ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ. ತರಬೇತಿಗಳು, ಧನಸಹಾಯ, ಆಶ್ರಯ ಯೋಜನೆಗಳು, ಹಾಗೂ ಸಬ್ಸಿಡಿ ಸಹಿತ ಸಾಲ ಸೌಲಭ್ಯಗಳು ಪರಿಶಿಷ್ಟ ಜಾತಿ ಸಮುದಾಯದವರಿಗೆ ದೊರೆಯುತ್ತವೆ. ಈ ವಿಷಯದ ಬಗ್ಗೆ ಮಹಿಳೆಯರಿಗೆ ಎಷ್ಟರ ಮಟ್ಟಿಗೆ ಅರಿವು ಇದೆ ಎಂಬವುದನ್ನು ತಿಳಿದು ಕೊಳ್ಳುವುದು ಅತೀ ಅವಶ್ಯಕವಾಗಿರುತ್ತದೆ.

**ರೇಖಾಚಿತ್ರ ೪.೨.೨ ಸರಕಾರಿ ಸವಲತ್ತುಗಳ ಬಗ್ಗೆ ಅರಿವು**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ರೇಖಾಚಿತ್ರದಲ್ಲಿ ಉಲ್ಲೇಖಿಸಿರುವಂತೆ ಮುಂಡಾಲ ಸಮುದಾಯದ ೮೮% ದಷ್ಟು ಮಹಿಳೆಯರಿಗೆ, ಸರಕಾರದಿಂದ ಸಿಗುವ ಸವಲತ್ತುಗಳ ಬಗ್ಗೆ ಅರಿವು ಇದೆ. ಆದರೆ ೧೨% ದಷ್ಟು ಮಹಿಳೆಯರಿಗೆ ಪಂಚಾಯತ್‌ಗಳಲ್ಲಿ ಪರಿಶಿಷ್ಟ ಜಾತಿಯ ಜನರ ಅಭಿವೃದ್ಧಿಗಾಗಿ ಅನೇಕ ಯೋಜನೆಗಳಿವೆ ಎಂಬ ಬಗ್ಗೆ ಮಾಹಿತಿಗಳೇ ಇಲ್ಲವಾಗಿದೆ. ಸರಕಾರಿ ಸವಲತ್ತುಗಳ ಅರಿವು ಇದೆ ಎಂದು ಹೇಳಿರುವ ಒಟ್ಟು ಮಹಿಳೆಯರಲ್ಲಿ ೫೦% ದಷ್ಟು ಮಹಿಳೆಯರಿಗೆ ಗ್ರಾಮ ಪಂಚಾಯತ್ ನಿಂದ ಕೇವಲ ಮನೆ ರಿಪೇರಿಗೆ ಹಾಗೂ ಶೌಚಾಲಯ ನಿರ್ಮಾಣಕ್ಕಾಗಿ ಧನ ಸಹಾಯ ಸಿಗುತ್ತದೆ ಎನ್ನುವುದರ ಮಾಹಿತಿಯು ಇದೆಯೇ ಹೊರತು ಇತರ ಯಾವುದೇ ವಿಷಯಗಳ ಬಗ್ಗೆ ಮಾಹಿತಿಗಳಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬಹಳಷ್ಟು ಜನರು ಯಾವತ್ತೂ ಪಂಚಾಯತ್ ಕಚೇರಿಗಳಲ್ಲಿ ಈ ಬಗ್ಗೆ ಮಾಹಿತಿಯನ್ನು ಪಡೆಯಲೇ ಇಲ್ಲ. ಕೇವಲ ಸ್ಥಳೀಯ ಪಂಚಾಯತ್ ಸದಸ್ಯರು ತಿಳಿಸಿದ ಕೆಲವೇ ಸವಲತ್ತುಗಳ ಬಗ್ಗೆ ಅರಿವಿದೆ ಅವು ಮೊದಲೇ ತಿಳಿಸಿರುವಂತೆ ಮನೆ ರಿಪೇರಿಗಾಗಿ ಹಾಗೂ ಶೌಚಾಲಯಕ್ಕಾಗಿ ಧನಸಹಾಯ. ಇವೇ ಮೊದಲಾದ ಸವಲತ್ತುಗಳನ್ನು ಜನರು ಹೆಚ್ಚಿನ ಸಂಖ್ಯೆಯಲ್ಲಿ ಬಳಸಿಕೊಂಡಿರುತ್ತಾರೆ. ಮಹಿಳೆಯರ ಸ್ಥಳೀಯ ಆಡಳಿತದಲ್ಲಿ ಭಾಗವಹಿಸುವಿಕೆಯ ಬಗ್ಗೆ ಹೇಳುವುದಾದರೆ, ಕೇವಲ ೨% ದಷ್ಟು ಮಹಿಳೆಯರು ಸ್ಥಳೀಯ ಆಡಳಿತದಲ್ಲಿರುವುದು ಕಾಣಬಹುದು.

## ೪.೩ ಮಾಹಿತಿದಾರರ ಆರ್ಥಿಕ ಸ್ಥಿತಿಗತಿಗಳು

ಮುಂಡಾಲ ಸಮುದಾಯದವರಿಗೆ ಯಾವುದೇ ನಿರ್ದಿಷ್ಟವಾದ ಕುಲ ಕಸಬು ಎಂಬುವಂತಹದು ಇಲ್ಲ. ಪೂರ್ವದಲ್ಲಿ ಕೃಷಿ ಕೂಲಿ ಕಾರ್ಮಿಕರಾಗಿಯೇ ದುಡಿದ ಈ ಸಮುದಾಯದವರು ಈಗಲೂ ಗ್ರಾಮೀಣ ಪ್ರದೇಶದಲ್ಲಿ ಕೂಲಿ ಕಾರ್ಮಿಕರಾಗಿಯೇ ದುಡಿಯುತ್ತಿದ್ದಾರೆ. ಕೆಲವು ಕುಟುಂಬದ ಹಿರಿಯರು ಚಾಪೆ ಹಾಗೂ ಬುಟ್ಟಿ ಹೆಣೆಯುವ ಕಲೆಯಲ್ಲಿ ಪರಿಣತಿ ಹೊಂದಿದ್ದರು ಎಂಬುದನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ತಿಳಿದು ಬಂದಿದೆ. ಆದರೆ ಇತ್ತೀಚಿನ ದಿನಗಳಲ್ಲಿ ನಗರ ಪ್ರದೇಶಗಳಲ್ಲಿ ಆರ್ಥಿಕವಾಗಿ ಅಭಿವೃದ್ಧಿ ಹೊಂದಿರುವಂತಹ ಕುಟುಂಬಗಳಲ್ಲಿ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿಲಾಗುತ್ತಿದ್ದು, ಖಾಸಗಿ ವಲಯದ ಉದ್ಯೋಗಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ಮಾಡುವುದನ್ನು ಕಾಣಬಹುದು.

## ಕೋಷ್ಟಕ ೪.೩.೧ ಮಾಹಿತಿದಾರರ ಉದ್ಯೋಗದ ವಿವರಗಳು

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ಮನೆವಾರ್ತೆ | ೩೩ | ೩೧.೪೩ |
| ೨ | ಕೂಲಿ | ೩೦ | ೨೮.೫೭ |
| ೩ | ಬೀಡಿ ಕಟ್ಟುವುದು | ೧೪ | ೧೩.೩೩ |
| ೪ | ಸರಕಾರಿ ಉದ್ಯೋಗ | ೧೦ | ೯.೫೨ |
| ೫ | ಅರೆಕಾಲಿಕ | ೧೬ | ೧೫.೨೪ |
| ೬ | ಸ್ವ ಉದ್ಯೋಗ | ೨ | ೧.೯೦ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ಅಂಕಿ ಅಂಶಗಳಲ್ಲಿ ಉಲ್ಲೇಖಿಸಿರುವಂತೆ ಮುಂಡಾಲ ಸಮುದಾಯದ ಒಟ್ಟು ೧೦೫ ಮಾಹಿತಿದಾರರಲ್ಲಿ ೩೧.೪೩%ದಷ್ಟು ಮಾಹಿತಿದಾರರು ಮನೆವಾರ್ತೆಯನ್ನು ನೆಚ್ಚಿಕೊಂಡಿರುವವರು. ೨೮.೫೭%ದಷ್ಟು ಮಹಿಳೆಯರು ಕೂಲಿ ಕಾರ್ಮಿಕರಾಗಿದ್ದಾರೆ, ೧೩.೩೩%ದಷ್ಟು ಮಹಿಳೆಯರು ಬೀಡಿ ಉದ್ದಿಮೆಯನ್ನು ಅವಲಂಬಿಸಿದ್ದಾರೆ. ೯.೫೨%ದಷ್ಟು ಮಹಿಳೆಯರು ಸರಕಾರಿ ಕಚೇರಿಗಳಲ್ಲೂ ಹಾಗೂ ೧೫.೨೪%ದಷ್ಟು ಮಹಿಳೆಯರೂ ಖಾಸಗಿ ಅರೆಕಾಲಿಕ ನೌಕರರಾಗಿದ್ದಾರೆ. ಕೇವಲ ೧.೯೦% ದಷ್ಟು ಮಹಿಳೆಯರು ಸ್ವ ಉದ್ಯೋಗವನ್ನು ಪ್ರಾರಂಭಿಸಿರುತ್ತಾರೆ.

ಮಹಿಳೆಯರ ಉದ್ಯೋಗದ ಬಗ್ಗೆ ವಿಶ್ಲೇಷಣೆಯನ್ನು ಮಾಡುವಾಗ ಹೆಚ್ಚಿನ ಸಂದರ್ಭಗಳಲ್ಲಿ ಮಹಿಳೆಯ ಮನೆವಾರ್ತೆಯ ಕೆಲಸವನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಅದೇ ರೀತಿ ಸಂದರ್ಶನ ನಡೆಸಲಾದ ೧೦೫ ಮಹಿಳೆಯರಲ್ಲಿ ಶೇಕಡಾ ೩೧.೪೩ ರಷ್ಟು ಮಹಿಳೆಯರು ಮನೆವಾರ್ತೆಯನ್ನು ಅವಲಂಬಿಸಿರುತ್ತಾರೆ. ಉಳಿದಂತೆ ದಿನಕೂಲಿ ಕಾರ್ಮಿಕರ ಸಂಖ್ಯೆಯೂ ಹಾಗೂ ಖಾಸಗಿ ವಲಯಗಳಲ್ಲಿ ಅರೆಕಾಲಿಕ ನೌಕರರ ಸಂಖ್ಯೆಯು ಹೆಚ್ಚಾಗಿರುವುದನ್ನು ಗಮನಿಸಬಹುದು.

**ಕೋಷ್ಟಕ ೪.೩.೨ ಮಾಹಿತಿದಾರರ ಮಾಸಿಕ ಆದಾಯದ ವಿವರಗಳು**

| ಕ್ರ.ಸ | ವರ್ಗೀಕರಣ (ರೂ ಗಳಲ್ಲಿ) | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ೧೦೦೦ ಕ್ಕಿಂತ ಕಡಿಮೆ | ೨೧ | ೨೦ |
| ೨ | ೧೦೦೦-೩೦೦೦ | ೩೩ | ೩೧.೪೩ |
| ೩ | ೪೦೦೦-೭೦೦೦ | ೬ | ೫.೭೧ |
| ೪ | ೮೦೦೦-೧೧೦೦೦ | ೪ | ೩.೮೧ |
| ೫ | ೧೨೦೦೦ ಕ್ಕಿಂತ ಅಧಿಕ | ೧೦ | ೯.೫೨ |
| ೬ | ಅನ್ವಯಿಸುವುದಿಲ್ಲ | ೩೧ | ೨೯.೫೨ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಕೋಷ್ಟಕದಲ್ಲಿರುವ ಅಂಕಿ ಅಂಶಗಳ ಆಧಾರದಲ್ಲಿ ಮಹಿಳೆಯರ ಮಾಸಿಕ ಆದಾಯದ ವಿವರಣೆಯನ್ನು ಪಡೆಯಬಹುದು. ೩೧.೪೩% ದಷ್ಟು ಮಹಿಳೆಯರು ಮಾಸಿಕ ರೂ.೧೦೦೦- ರೂ. ೩೦೦೦ ಆದಾಯವನ್ನು ಪಡೆಯುತ್ತಾರೆ. ೨೦% ದಷ್ಟು ಮಹಿಳೆಯರು ಮಾಸಿಕ ರೂ.೧೦೦೦ ಕ್ಕಿಂತಲೂ ಕಡಿಮೆ ಆದಾಯವನ್ನು ಪಡೆಯುತ್ತಾರೆ. ಉಳಿದಂತೆ ೫.೮೧% ದಷ್ಟು ಮಹಿಳೆಯರು ರೂ.೪೦೦೦ ದಿಂದ ರೂ. ೭೦೦೦ ವರೆಗೂ ಹಾಗೂ ಶೇಕಡಾ ೩.೮೧ ಮಹಿಳೆಯರು ರೂ. ೮೦೦೦ ದಿಂದ ೧೧೦೦೦ ಮಾಸಿಕ ಆದಾಯವನ್ನು ಪಡೆಯುತ್ತಾರೆ. ಕೇವಲ ಶೇಕಡ ೯.೫೨ ರಷ್ಟು ಮಹಿಳೆಯರ ಮಾಸಿಕ ಆದಾಯ ೧೨೦೦೦ ಕ್ಕಿಂತಲೂ ಅಧಿಕವಾಗಿದೆ.

ಮಾಹಿತಿದಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಿನಕೂಲಿ ಕಾರ್ಮಿಕರಾಗಿರುವುದರಿಂದ ಅವರ ಮಾಸಿಕ ಆದಾಯ ರೂ.೧೦೦೦ ದಿಂದ ರೂ. ೩೦೦೦. ಇದರಿಂದ ಮಹಿಳೆಯರಿಗೆ ಆರ್ಥಿಕ ಸ್ಥಿರತೆಯನ್ನು ಪಡೆಯುವುದು ಕಷ್ಟಸಾಧ್ಯವಾಗುತ್ತದೆ. ಇನ್ನು ಮಹಿಳೆಯರ ಉಳಿತಾಯದ ಬಗ್ಗೆ ಗಮನಹರಿಸುವುದಾದರೆ ಶೇಕಡಾ ೮೬.೭೧ ರಷ್ಟು ಮಹಿಳೆಯರು ತಾವು ಗಳಿಸಿದ ಆದಾಯದಲ್ಲಿ ಉಳಿತಾಯವನ್ನು ಮಾಡುತ್ತಾರೆ. ಹಾಗೆಯೇ ಶೇಕಡಾ ೧೪.೨೮ ರಷ್ಟು ಮಹಿಳೆಯರಿಗೆ ಉಳಿತಾಯ ಮಾಡುವುದು ಸಾಧ್ಯವಾಗುತ್ತಿಲ್ಲ. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಸ್ವ ಸಹಾಯ ಸಂಘದ ಸದಸ್ಯರಾಗಿರುವುದರಿಂದ ಹೆಚ್ಚಾಗಿ ತಮ್ಮ ಹಣವನ್ನು ಸಂಘಗಳಲ್ಲೇ ಉಳಿತಾಯ ಮಾಡುತ್ತಾರೆ. ಉಳಿತಾಯದ ಅಂಕಿ ಅಂಶಗಳು ಈ ಕೆಳಗಿನಂತಿವೆ.

**ಕೋಷ್ಟಕ ೪.೩.೩ ಮಾಹಿತಿದಾರರ ಉಳಿತಾಯದ ಮೂಲಗಳ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ಬ್ಯಾಂಕ್ | ೩೦ | ೨೯ |
| ೨ | ಅಂಚೆಕಚೇರಿ | ೫ | ೫ |
| ೩ | ಸ್ವಸಹಾಯ ಸಂಘದ ನಿಧಿ | ೫೨ | ೫೦ |
| ೪ | ಪಿಗ್ಮಿ | ೩ | ೩ |
| ೫ | ಅನ್ವಯಿಸುವುದಿಲ್ಲ | ೧೫ | ೧೪ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಶೇಕಡಾ ೫೦ರಷ್ಟು ಮಹಿಳೆಯರು ಸ್ವ ಸಹಾಯ ಸಂಘಗಳ ಸದಸ್ಯರಾಗಿರುವುದರಿಂದ ಅಲ್ಲಿಯೇ ಪ್ರತೀ ವಾರ ಉಳಿತಾಯ ಮಾಡುತ್ತಾರೆ. ಇನ್ನು ಉಳಿದಂತೆ ಖಾಸಗಿ ವಲಯಗಳಲ್ಲಿ ಹಾಗೂ ಸರಕಾರಿ ಕಚೇರಿಗಳಲ್ಲಿ ಕೆಲಸ ಮಾಡುವ ಮಹಿಳೆಯರು ಬ್ಯಾಂಕ್(೨೯%) ಹಾಗೂ ಅಂಚೆಕಚೇರಿಗಳಲ್ಲಿ (೫%) ಉಳಿತಾಯವನ್ನು ಮಾಡುತ್ತಾರೆ. ಶೇಕಡಾ ೩ ರಷ್ಟು ಮಹಿಳೆಯರು ಪಿಗ್ಮಿ ಯಲ್ಲಿ ಹಣ ಹೂಡಿಕೆ ಮಾಡುತ್ತಾರೆ. ಉಳಿದಂತೆ ೧೪%ದಷ್ಟು ಮಹಿಳೆಯರು ಅವಲಂಬಿತರಾಗಿರುವುದರಿಂದ ಯಾವುದೇ ರೀತಿಯ ಉಳಿತಾಯವನ್ನು ಮಾಡುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಸ್ವಸಹಾಯ ಸಂಘಟನೆಗಳು ಮಹಿಳೆಯರ ಸಬಲೀಕರಣ ಮತ್ತು ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ. ವೈಯಕ್ತಿಕ, ಸಾಮಾಜಿಕ ಹಾಗೂ ಆರ್ಥಿಕ ಬೆಳವಣಿಗೆಯ ಬಗ್ಗೆ ಸ್ವಸಹಾಯ ಗುಂಪುಗಳು ಕಾರ್ಯ ನಿರ್ವಹಿಸುವುದರಿಂದ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಈ ಸಂಘಟನೆಗಳತ್ತ ಒಲವು ತೋರುವುದನ್ನು ಕಾಣಬಹುದು. ಅದೇ ರೀತಿ ಪ್ರಸ್ತುತ ಮುಂಡಾಲ ಸಮುದಾಯದ ೪೯.೫೨% ದಷ್ಟು ಮಹಿಳೆಯರು ವಿವಿಧ ಸ್ವಸಹಾಯ ಸಂಘಗಳಲ್ಲಿ ಸದಸ್ಯರಾಗಿದ್ದಾರೆ. ತಮ್ಮಲ್ಲಿರುವಂತಹ ಅಲ್ಪ ಆದಾಯವನ್ನು ಉಳಿತಾಯ ಮಾಡಿ ಅವಶ್ಯಕತೆಯಿದ್ದಾಗ ಸಾಲ ಪಡೆಯಬಹುದು ಎಂಬುವುದು ಅನೇಕ ಸ್ವಸಹಾಯ ಗುಂಪಿನ ಸದಸ್ಯರ ಅಭಿಪ್ರಾಯ.

**ಸ್ವಂತ ಜಮೀನಿನ ವಿವರ :**

ಈ ಅಧ್ಯಯನಕ್ಕಾಗಿ ಕ್ಷೇತ್ರ ಕಾರ್ಯವನ್ನು ಪರಿಶಿಷ್ಟ ಜಾತಿಯ ಕೊಲನಿ ಹಾಗೂ ೫ ಸೆಂಟ್ಸ್ ಪ್ರದೇಶದಲ್ಲಿ ನಡೆಸಲಾಗಿದೆ. ಮಾಹಿತಿದಾರರ ವಾಸವಾಗಿರುವಂತಹ ಜಮೀನಿನ ಅಂಕಿ ಅಂಶವನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೪.೩.೪ ಮಾಹಿತಿದಾರರ ಜಮೀನಿನ ವಿವರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ೧- ೫ ಸೆಂಟ್ಸ್ | ೩೭ | ೩೫.೨೪ |
| ೨ | ೬-೧೦ ಸೆಂಟ್ಸ್ | ೨೪ | ೨೨.೮೬ |
| ೩ | ೧೧-೧೫ ಸೆಂಟ್ಸ್ | ೨೦ | ೧೯.೦೫ |
| ೪ | ೧೬-೨೦ ಸೆಂಟ್ಸ್ | ೧೦ | ೯.೫೨ |
| ೫ | ೨೧-೫೦ ಸೆಂಟ್ಸ್ | ೧೩ | ೧೨.೩೮ |
| ೬ | ಅನ್ವಯಿಸುವುದಿಲ್ಲ | ೧ | ೦.೯೫ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮಾಹಿತಿದಾರರಲ್ಲಿ ಹೆಚ್ಚಿನ ಸಂಖ್ಯೆಯ ೩೫.೨೪% ದಷ್ಟು ಮಹಿಳೆಯರು ೫ ಸೆಂಟ್ಸ್ ಪ್ರದೇಶದಲ್ಲಿ ವಾಸ ಮಾಡವವರು ಆಗಿರುತ್ತಾರೆ. ೨೨.೮೬% ದಷ್ಟು ಮಹಿಳೆಯರು ೬-೧೦ ಸೆಂಟ್ಸ್‌ನಲ್ಲಿಯೂ ಹಾಗೂ ೧೯.೦೫% ದಷ್ಟು ಮಹಿಳೆಯರಿಗೆ ೧೧-೧೫ ಸೆಂಟ್ಸ್ ಜಾಗವಿದೆ. ಶೇಕಡಾ ೯.೫೨ ರಷ್ಟು ಮಾಹಿತಿದಾರರಿಗೆ ೧೬-೨೦ ಸೆಂಟ್ಸ್ ಜಾಗ ಹಾಗೂ ೧೨.೩೮ % ದಷ್ಟು ಮಾಹಿತಿದಾರರಿಗೆ ೨೧-೫೦ ಸೆಂಟ್ಸ್‌ಗಳಷ್ಟು ಜಾಗವಿದೆ. ೦.೯೫% ದಷ್ಟು ಮಾಹಿತಿದಾರರು ಬಾಡಿಗೆ ಮನೆಯಲ್ಲಿ ವಾಸ ಮಾಡುವವರಾಗಿರುತ್ತಾರೆ. ಶೇಕಡ ೯೭.೧೪ ರಷ್ಟು ಮನೆಗಳು ಹೆಂಚಿನ ಮನೆಗಳಾಗಿದ್ದು ಕೇವಲ ೨.೮೫% ದಷ್ಟು ಆರ್.ಸಿ.ಸಿ ಮನೆಗಳಿವೆ.

**ಮಾಹಿತಿದಾರರ ಸಾಲದ ವಿವರಗಳು**

ಒಟ್ಟು ೧೦೫ ಮಾಹಿತಿದಾರರಲ್ಲಿ ೬೫% ದಷ್ಟು ಮಹಿಳೆಯರು ವಿವಿಧ ಮೂಲಗಳಿಂದ ಸಾಲ ಪಡೆದುಕೊಂಡಿರುತ್ತಾರೆ. ಸಾಲ ಪಡೆದುಕೊಂಡ ಮೂಲಗಳ ಬಗ್ಗೆ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೪.೩.೫ ಮಾಹಿತಿದಾರರ ಸಾಲದ ವಿವರಗಳು**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ಬ್ಯಾಂಕ್ | ೧೭ | ೧೬.೧೯ |
| ೨ | ಸ್ವಸಹಾಯ ಸಂಘದ ನಿಧಿ | ೫೧ | ೪೮.೫೭ |
| ೩ | ಅನ್ವಯಿಸುವುದಿಲ್ಲ | ೩೭ | ೩೫.೨೪ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ಕೋಷ್ಟಕದಲ್ಲಿ ಉಲ್ಲೇಖಿಸಿರುವಂತೆ ೪೮.೫೭% ದಷ್ಟು ಮಹಿಳೆಯರು ಸ್ವಸಹಾಯ ಸಂಘಗಳಿಂದ ಸಾಲವನ್ನು ಪಡೆದಿರುತ್ತಾರೆ ಹಾಗೂ ಶೇಕಡಾ ೧೬.೧೯ ದಷ್ಟು ಮಹಿಳೆಯರು ವಿವಿಧ ಉದ್ದೇಶಗಳಿಗಾಗಿ ಬ್ಯಾಂಕಿನಿಂದ ಸಾಲವನ್ನು ಪಡೆದಿರುತ್ತಾರೆ. ಸಾಲ ಪಡೆದುಕೊಂಡ ಉದ್ದೇಶಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೪.೩.೬ ಮಾಹಿತಿದಾರರ ಸಾಲದ ಉದ್ದೇಶ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ಮನೆ ರಿಪೇರಿ | ೩೦ | ೨೮.೫೭ |
| ೨ | ಮದುವೆ ಸಮಾರಂಭಗಳಿಗೆ | ೮ | ೭.೬೨ |
| ೩ | ವಿಧ್ಯಾಭ್ಯಾಸ | ೧೭ | ೧೬.೧೯ |
| ೪ | ಚಿನ್ನ ಖರೀದಿ | ೪ | ೩.೮೧ |
| ೫ | ವಾಹನ ಖರೀದಿ | ೨ | ೧.೯೦ |
| ೬ | ಇತರೆ | ೪ | ೩.೮೧ |
| ೭ | ಶೌಚಾಲಯ ನಿರ್ಮಾಣಕ್ಕಾಗಿ | ೩ | ೨.೮೬ |
| | ಅನ್ವಯಿಸುವುದಿಲ್ಲ | ೩೭ | ೩೫.೨೪ |
| | ಒಟ್ಟು | ೧೦೫ | ೧೦೦% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಶೇಕಡಾ ೨೯.೫೭ ರಷ್ಟು ಮಹಿಳೆಯರು ಮನೆ ರಿಪೇರಿ ಹಾಗೂ ಮನೆ ಕಟ್ಟಲು ಸಾಲವನ್ನು ಪಡೆದಿರುತ್ತಾರೆ. ೧೬.೧೯% ದಷ್ಟು ಮಹಿಳೆಯರು ಸ್ವಂತ/ ಮಕ್ಕಳ ವಿಧ್ಯಾಭ್ಯಾಸಕ್ಕಾಗಿಯೂ, ೭.೬೨% ದಷ್ಟು ಮಹಿಳೆಯರು ತಮ್ಮ/ ಮಕ್ಕಳ ಮದುವೆಗಾಗಿ ಸಾಲವನ್ನು ಪಡೆದಿರುತ್ತಾರೆ. ಒಟ್ಟು ೭.೬೨% ದಷ್ಟು ಮಹಿಳೆಯರು ಚಿನ್ನ ಖರೀದಿಗಾಗಿ ಹಾಗೂ ಸ್ವ ಉದ್ಯೋಗಕ್ಕಾಗಿ ಸಾಲವನ್ನು ಪಡೆದಿದ್ದಾರೆ. ಇನ್ನು ಉಳಿದಂತೆ ೨.೮೬% ದಷ್ಟು ಮಹಿಳೆಯರು ಶೌಚಾಲಯ ನಿರ್ಮಾಣಕ್ಕಾಗಿ ಸಾಲವನ್ನು ಪಡೆದಿರುತ್ತಾರೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಂಡಾಲ ಸಮುದಾಯದಲ್ಲಿ ಹೆಚ್ಚಾಗಿ ಮಹಿಳೆಯರೇ ಮನೆಯ ಜವಾಬ್ದಾರಿಯನ್ನು ಹೊರುವವರು. ಸಮಾಜದಲ್ಲಿ ಇತರರಂತೆ ತಮ್ಮ ಮನೆಯೂ ಇರಬೇಕು ಹಾಗೂ ಕೌಟುಂಬಿಕ ಸ್ಥಿರತೆಗಾಗಿ ಸಾಲ ಪಡೆದಾದರೂ ಕುಟುಂಬದ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಾರೆ.

## ೪. ೪ ಮಹಿಳಾ ಸಬಲೀಕರಣದ ಆಯಾಮಗಳು:

ಮಹಿಳೆಯರಲ್ಲಿ ಬೌದ್ಧಿಕ, ರಾಜಕೀಯ,ಸಾಮಾಜಿಕ , ಆರ್ಥಿಕ ಬಲವನ್ನು ಹೆಚ್ಚಿಸುವುದಕ್ಕೆ ಮಹಿಳಾ ಸಬಲೀಕರಣ, ಸಶಕ್ತತೆ ಎನ್ನುತ್ತಾರೆ. ಸಬಲೀಕರಣ ಶಕ್ತತೆ ಎನ್ನುವುದು ಸಾಮಾನ್ಯವಾಗಿ ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ಬೆಳೆಯಿಸಿ, ಅವರ ಸಾಮರ್ಥ್ಯವನ್ನು ಹೆಚ್ಚಿಸುವುದೇ ಆಗಿರುತ್ತದೆ. ಮೂಲತಃ ಮುಂಡಾಲ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೇ ಕುಟುಂಬದ ಹಾಗೂ ಮಕ್ಕಳ ಜವಾಬ್ದಾರಿಯನ್ನು ಹೊರುವವರು. ಹಾಗಾಗಿ ಮುಂಡಾಲ ಸಮುದಾಯದ ಮಹಿಳೆಯರಲ್ಲಿ ಸಬಲೀಕರಣದ ನಿರ್ಧಾರಕಗಳು ಎಷ್ಟರ ಮಟ್ಟಿಗೆ ಅನ್ವಯವಾಗುತ್ತದೆ ಎಂಬುದನ್ನು ತಿಳಿದು ಕೊಳ್ಳಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

### ಕೋಷ್ಟಕ ೪.೪.೧ ಮಾಹಿತಿದಾರರ ಸಬಲೀಕರಣದ ನಿರ್ಧಾರಕಗಳು

| ಕ್ರ.ಸ | ವರ್ಗೀಕರಣ | ಇದೆ | ಇಲ್ಲ |
|---|---|---|---|
| ೧ | ಗೃಹೋಪಯೋಗಿ ವಸ್ತುಗಳನ್ನು ಖರೀದಿಯ ಬಗ್ಗೆ | ೮೭% | ೧೩% |
| ೨ | ಆದಾಯದ ಮೊತ್ತವನ್ನು ವಿನಿಯೋಗಿಸಲು | ೬೮% | ೩೩% |
| ೩ | ಉದ್ಯೋಗಕ್ಕೆ ಸೇರ್ಪಡೆಗೊಳ್ಳುವ ಬಗ್ಗೆ | ೭೩% | ೨೭% |
| ೪ | ಮದುವೆಯ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು | ೭೧% | ೨೯% |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ಕೋಷ್ಟಕದಲ್ಲಿರುವಂತೆ ಶೇಕಡಾ ೮೭% ದಷ್ಟು ಮಹಿಳೆಯರು ತಮ್ಮ ಮನೆಗೆ ಬೇಕಾದ ಗೃಹೋಪಯೋಗಿ ವಸ್ತುಗಳನ್ನು ತಾವೇ ಖರೀದಿಸುತ್ತಾರೆ. ಹಾಗೆಯೇ ೧೩% ದಷ್ಟು ಮಹಿಳೆಯರಿಗೆ ತಮಗೆ ಬೇಕಾದ ಗೃಹೋಪಯೋಗಿ ವಸ್ತುಗಳನ್ನು ಖರೀದಿಸುವ ಅಧಿಕಾರವಿಲ್ಲ. ಕಾರಣ ಏನೇ ಖರೀದಿಸಬೇಕಿದ್ದರೂ ತಮ್ಮ ಗಂಡನ ಅನುಮತಿಯನ್ನು ಪಡೆಯಬೇಕು ಹಾಗೂ ಕೆಲವು ಮಹಿಳೆಯರ ಅಭಿಪ್ರಾಯದಂತೆ ಮನೆಗೆ ಸಂಬಂಧಿಸಿದ ಅವಶ್ಯಕ ವಸ್ತುಗಳನ್ನು ಪುರುಷರೇ ಮನೆಗೆ ತರುತ್ತಾರೆ. ಈ ಕಾರಣದಿಂದಾಗಿ ಅವರಿಗೆ ಯವುದೇ ವಸ್ತುಗಳನ್ನು ಖರೀದಿ ಮಾಡುವ ಅವಕಾಶಗಳೇ ಇರುವುದಿಲ್ಲ.

ಶೆಕಡಾ ೬೮.೫೭ ರಷ್ಟು ಮಹಿಳೆಯರು ವಿವಿಧ ವಲಯಗಳಲ್ಲಿ ದುಡಿಯುತ್ತಿದ್ದಾರೂ ೩೩% ದಷ್ಟು ಮಹಿಳೆಯರಿಗೆ ತಮಗೆ ದೊರೆತಂತಹ ಆದಾಯವನ್ನು ವಿನಿಯೋಗಿಸುವ ಅವಕಾಶಗಳಿಲ್ಲ. ಮಾಹಿತಿದಾರರ ಅಭಿಪ್ರಾಯದಂತೆ ತಾವು ಖರ್ಚು ಮಾಡುವ ಹಾಗೂ ಖರ್ಚು ಮಾಡಿದ ಹಣದ ವಿವರವನ್ನು ತಮ್ಮ ಗಂಡನಿಗೆ ತಿಳಿಸಲೇ ಬೇಕು. ೨೭% ದಷ್ಟು ಮಹಿಳೆಯರಿಗೆ ಉದ್ಯೋಗಕ್ಕೆ ಸೇರ್ಪಡೆಗೊಳ್ಳುವ ನಿರ್ಧಾರಗಳಿಲ್ಲ ಹಾಗೂ ೨೯% ದಷ್ಟು ಮಹಿಳೆಯರ ಅಭಿಪ್ರಾಯದಂತೆ ಅವರಿಗೆ ಮದುವೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿಸುವ ಅಧಿಕಾರವಿಲ್ಲ.

**ರೇಖಾಚಿತ್ರ ೪.೪.೧ ಮಕ್ಕಳ ಶಿಕ್ಷಣದ ನಿರ್ಧಾರ**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮಾಹಿತಿದಾರರಲ್ಲಿ ಶೇಕಡಾ ೪೮ ರಷ್ಟು ಮಹಿಳೆಯರಿಗೆ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ನಿರ್ಧಾರಗಳನ್ನು ತೆಗೆದುಗೊಳ್ಳುವ ಅವಕಾಶವಿದೆ. ೨೫% ದಷ್ಟು ಮಾಹಿತಿದಾರರ ಅಭಿಪ್ರಾಯದಂತೆ ಮಕ್ಕಳ ಕುರಿತಾದ ಯಾವುದೇ ನಿರ್ಧಾರಗಳನ್ನು ಗಂಡ ಹೆಂಡತಿ ಇಬ್ಬರೂ ನಿರ್ಧರಿಸುತ್ತಾರೆ. ಉಳಿದಂತೆ ೮% ದಷ್ಟು ಮಹಿಳೆಯರಿಗೆ ಈ ಸ್ವಾತಂತ್ರ್ಯ ಇಲ್ಲದಾಗಿದೆ. ಉದ್ಯೋಗಸ್ಥ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳ ವಿಧ್ಯಾಭ್ಯಾಸದ ಬಗ್ಗೆ ಗಮನ ಹರಿಸುತ್ತಾರೆ. ಆದರೆ ಮನೆವಾರ್ತೆ ಹಾಗೂ ಅವಲಂಬಿತ ಮಹಿಳೆಯರಿಗೆ ಈ ನಿರ್ಧಾರಗಳನ್ನು ತೆಗೆದುಕೊಳ್ಳುವ ಅವಕಾಶಗಳಿರುವುದಿಲ್ಲ.

ಮಹಿಳಾ ಸಬಲೀಕರಣಗಳ ವಿಶ್ಲೇಷಣೆಯನ್ನು ಮಾಡುವಾಗ ಅದರಲ್ಲಿ ಕುಟುಂಬ ಯೋಜನೆಯ ಅಳಡಿಕೆಯೂ ಒಂದು ನಿರ್ಧಾರಕವಾಗಿ ಪಾತ್ರ ವಹಿಸುತ್ತದೆ. ಈ ನಿಟ್ಟನಲ್ಲಿ ಮಾಹಿತಿದಾರರಲ್ಲಿ ಈ ವಿಷಯದ ಬಗ್ಗೆ ಪಡೆದ ಅಭಿಪ್ರಾಯಗಳ ಅಂಕಿ ಅಂಶಗಳು ಈ ಕೆಳಗಿನಂತಿದೆ.

**ರೇಖಾಚಿತ್ರ ೪.೪.೨ ಕುಟುಂಬ ಯೋಜನೆ ಅಳವಡಿಸಿಕೊಂಡಿರುವ ವಿವರ**




ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಶೇಕಡಾ ೩೩ ರಷ್ಟು ಮಾಹಿತಿದಾರರು ಕುಟುಂಬ ಯೋಜನೆಯನ್ನು ಅಳವಡಿಸಿಕೊಂಡಿರುತ್ತಾರೆ. ಹಾಗೂ ೧೨%ದಷ್ಟು ಮಹಿಳೆಯರು ಕುಟುಂಬ ಯೋಜನೆಯನ್ನು ಅಳವಡಿಸಿಕೊಂಡಿರುವುದಿಲ್ಲ. ಕುಟುಂಬ ಯೋಜನೆಯನ್ನು ಯಾರ ನಿಧಾರದಂತೆ ಅಳವಡಿಸಲಾಗಿದೆ ಎಂಬ ಬಗ್ಗೆ ಕೆಳಗಿನ ಕೋಷ್ಟಕವು ವಿವರಿಸುತ್ತದೆ.

**ಕೋಷ್ಟಕ ೪.೪.೨ ಕುಟುಂಬ ಯೋಜನೆ ಅಳವಡಿಸಿರುವ ನಿರ್ಧಾರ**

| ಕ್ರ.ಸ | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾವಾರು(%) |
|---|---|---|---|
| ೧ | ಸ್ವಂತ ನಿರ್ಧಾರ | ೧೩ | ೩೭.೧೪ |
| ೨ | ಗಂಡನ ನಿರ್ಧಾರ | ೭ | ೨೦ |
| ೩ | ಒಟ್ಟಾಗಿ ನಿರ್ಧರಿಸಿರುವುದು | ೧೫ | ೪೨.೮೬ |
| | **ಒಟ್ಟು** | **೩೫** | **೧೦೦%** |

ಮೂಲ: ಸಂಶೋಧಕರ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲಿನ ಕೋಷ್ಟಕದಲ್ಲಿ ಉಲ್ಲೇಕಿಸಿರುವಂತೆ ಒಟ್ಟು ೩೫ ಮಾಹಿತಿದಾರರಲ್ಲಿ ಶೇಕಡಾ ೩೭.೧೪ ರಷ್ಟು ಮಹಿಳೆಯರು ಸ್ವ ಇಚ್ಛೆಯಿಂದಲೂ ಹಾಗೂ ೨೦% ದಷ್ಟು ಮಹಿಳೆಯರು ತಮ್ಮ ಗಂಡನ ನಿರ್ಧಾರದಂತೆ ಕುಟುಂಬ ಯೋಜನೆಯನ್ನು ಅಳವಡಿಸಿಕೊಂಡಿರುತ್ತಾರೆ. ಉಳಿದಂತೆ ೪೨.೮೬% ದಷ್ಟು ಮಾಹಿತಿದಾರರ ಅಭಿಪ್ರಾಯದಂತೆ ಗಂಡ ಹೆಂಡತಿ ಇಬ್ಬರೂ ಒಟ್ಟಾಗಿ ಈ ನಿರ್ಧಾರವನ್ನು ಮಾಡಿರುತ್ತಾರೆ.

**ಮಾಹಿತಿದಾರರು ಎದುರಿಸುತ್ತಿರುವ ಸಮಸ್ಯೆಗಳು:**

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಮಾಹಿತಿದಾರರು ಹೆಚ್ಚಿನ ಸಂಖ್ಯೆಯಲ್ಲಿ ಕೌಟುಂಬಿಕ ದೌರ್ಜನ್ಯಗಳು ಅನುಭವಿಸಿರುವ ಬಗ್ಗೆ ಹೆಚ್ಚಿನ ಅಂಕಿ ಅಂಶಗಳು ಲಭ್ಯವಾಗಿಲ್ಲ. ಆದರೂ ಅವಲೋಕನ ಹಾಗೂ ಸಂದರ್ಶನದ ಮೂಲಗಳಿಂದ ೫% ದಷ್ಟು ಮಹಿಳೆಯರು ಕೌಟುಂಬಿಕ ದೌರ್ಜನ್ಯವನ್ನು ಅನುಭವಿಸಿರುತ್ತಾರೆ ಎನ್ನುವುದು ತಿಳಿದು ಬಂದಿದೆ. ಸಹಜವಾಗಿ ಮಾಹಿತಿದಾರರ ಕುಟುಂಬಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೇ ಹಲವು ಜವಾಬ್ದಾರಿಗಳನ್ನು ವಹಿಸುವುದರಿಂದ ತಮ್ಮ ವೈಯಕ್ತಿಕ ಅಭಿವೃದ್ಧಿಯ ಬಗ್ಗೆ ಹೆಚ್ಚಿನ ಗಮನ ಕೊಡದೇ ಇರುವುದನ್ನು ಗಮನಿಸಬಹುದು. ಕೌಟುಂಬಿಕ ನೆಲೆಯಲ್ಲಿ ಅನೇಕ ಆರ್ಥಿಕ ಸಮಸ್ಯೆಗಳನ್ನು ಹೆಚ್ಚಿನ ಮಾಹಿತಿದಾರರು ಅನುಭವಿಸುತ್ತಿದ್ದಾರೆ. ಅದೇ ರೀತಿ ಸಾಮಾಜಿಕವಾಗಿ ಬೇರೆ ಸಮುದಾಯದ ಜನರೊಂದಿಗೆ ಬೆರೆಯಲು ಜಾತಿ ಅಸಮಾನತೆಗಳು ಕಾರಣವಾಗಿವೆ ಎಂಬುವುದು ಮಾಹಿತಿದಾರರ ಅಭಿಪ್ರಾಯ.

ಮುಂಡಾಲ ಸಮುದಾಯದ ಮಹಿಳೆಯರು ಸ್ತ್ರೀ ಸಹಜ ಗುಣದಂತೆ ಯಾವುದೇ ದೌರ್ಜನ್ಯವನ್ನು ವಿರೋಧಿಸಲು ಹೋಗುವುದಿಲ್ಲ, ತಮ್ಮ ಅಸ್ಥಿತ್ವ ಕೇವಲ ಕುಟುಂಬಕ್ಕೇ ಸೀಮಿತ ಎನ್ನುವ ದೃಷ್ಟಿಕೋನವನ್ನು ಹೊಂದಿರುವವರು. ಇವಿಷ್ಟೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಅಂಕಿ ಅಂಶಗಳ ವಿಶ್ಲೇಷಣೆ.

# ಅಧ್ಯಾಯ ೫

# ಅಧ್ಯಯನದ ಫಲಿತಗಳು

ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ಗ್ರಂಥಗಳು, ಲೇಖನಗಳು, ವರದಿಗಳು ಮತ್ತು ಪೂರ್ವಾಧ್ಯಯ ಪರಾಮರ್ಶೆಯ ಮೂಲಕ ವಿಶ್ಲೇಷಣೆ ಮಾಡುವುದರ ಜೊತಗೆ ಕ್ಷೇತ್ರಾಧಾರಿತ ಅಧ್ಯಯನವನ್ನು ಮಾಡಲಾಗಿದೆ. ಪ್ರಸ್ತುತ ಭಾಗ ಅಧ್ಯಯನದ ಕೊನೆಯ ಅಧ್ಯಾಯವಾಗಿರುವುದರಿಂದ ಅಧ್ಯಯನದ ಫಲಿತಗಳು , ಸಲಹೆಗಳು ಹಾಗೂ ಭವಿಷ್ಯದ ಸಂಶೋಧನಾ ಸಾಧ್ಯತೆಗಳನ್ನು ಒಳಗೊಂಡಿದೆ.

ಮುಂಡಾಲ ಸಮುದಾಯದ ಮಹಿಳೆಯರು ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿಯೂ ಹಿಂದುಳಿದಿದ್ದಾರೆ ಹಾಗೂ ಅವರ ಸಾಮಾಜಿಕ ಸ್ಥಿತಿಗತಿಯಲ್ಲಿ ಸುಧಾರಣೆಯಾಗಬೇಕಾಗಿದೆ ಎಂಬುದು ಅಧ್ಯಯನದ ಊಹೆಗಳಾಗಿದ್ದವು ಹಾಗೂ ಈ ಊಹೆಗಳನ್ನು ಕ್ಷೇತ್ರ ಕಾರ್ಯದಿಂದ ಲಭ್ಯವಾದ ಅಂಕಿ ಅಂಶಗಳು ಸ್ಪಷ್ಟೀಕರಿಸುತ್ತವೆ.

- ಅಂಕಿ ಅಂಶಗಳನ್ನು ಗಮನಿಸಿದಾಗ ಮುಂಡಾಲ ಸಮುದಾಯದ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದಿರುತ್ತಾರೆ. ಹಾಗೆಯೇ ಒಟ್ಟು ಮಾಹಿತಿದಾರರಲ್ಲಿ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗಿದೆ. ಪರಿಶಿಷ್ಟ ಜಾತಿಯ ಅಭಿವೃದ್ಧಿಗಾಗಿ ಅನೇಕ ಶೈಕ್ಷಣಿಕ ಮೀಸಲಾತಿಗಳಿದ್ದರೂ ಪದವಿ ಮತ್ತು ಉನ್ನತ ಶಿಕ್ಷಣ ಪಡೆದ ಮಹಿಳೆಯರ ಸಂಖ್ಯೆಯು ಇಲ್ಲಿ ಕಡಿಮೆ ಇದೆ. (ಕೋಷ್ಟಕ ೪.೧.೧)
- ಮಾಹಿತಿದಾರರ ಕುಟುಂಬ ಸದಸ್ಯರಲ್ಲಿ ೧೮.೮೪%ದಷ್ಟು ಸದಸ್ಯರು ಅನಕ್ಷರಸ್ಥರಾಗಿದ್ದು ಅವರಲ್ಲಿ ೧೪.೬೨% ಪುರುಷರೂ ಹಾಗೂ ೨೪.೭೯% ದಷ್ಟು ಮಹಿಳೆಯರಿದ್ದಾರೆ. ಪದವಿ ಹಾಗೂ ಉನ್ನತ ಶಿಕ್ಷಣವನ್ನು ಪಡೆದುಕೊಂಡಿರುವವರ ಸಂಖ್ಯೆ ಇವರಲ್ಲಿ ಕಡಿಮೆಯಿದೆ.(ಕೋಷ್ಟಕ ೪.೧.೩)
- ಪ್ರಸ್ತುತ ವಿಧ್ಯಾಭ್ಯಾಸ ಮಾಡುತ್ತಿರುವ ವಿಧ್ಯಾರ್ಥಿಗಳಲ್ಲೂ ಪದವಿ ಹಾಗೂ ಉನ್ನತ ಶಿಕ್ಷಣದ ಬಗ್ಗೆ ಒಲವು ತೋರುವವರ ಸಂಖ್ಯೆಯು ಕಡಿಮೆಯಿದೆ.(ಕೋಷ್ಟಕ ೪.೧.೪)
- ಮಾಹಿತಿದಾರರ ಕುಟುಂಬ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ(೩೦.೧೯%) ದಿನಕೂಲಿ ಕಾರ್ಮಿಕರಾಗಿದ್ದಾರೆ.(ಕೋಷ್ಟಕ ೪.೧.೫)
- ೪೩.೮% ದಷ್ಟು ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಅನುಭವಿಸಿರುವ ಬಗ್ಗೆ ವಿವರಿಸಿದ್ದಾರೆ.(ಕೋಷ್ಟಕ ೪.೨.೧)

❖ ೫೬% ದಷ್ಟು ಮಹಿಳೆಯರಿಗೆ ಜಾತಿ ಮೀಸಲಾತಿ ಕುರಿತಾದ ಅರಿವು ಇದೆ. ಉಳಿದಂತೆ ೪೪% ದಷ್ಟು ಮಹಿಳೆಯರಿಗೆ ಮೀಸಲಾತಿಯ ಕುರಿತಂತೆ ಯಾವುದೇ ರೀತಿಯ ಮಾಹಿತಿಗಳಿಲ್ಲ.(ರೇಖಾಚಿತ್ರ ೪.೨.೧)

❖ ೮೮% ದಷ್ಟು ಮಹಿಳೆಯರಿಗೆ, ಸರಕಾರದಿದ ಸಿಗುವ ಸವಲತ್ತುಗಳ ಬಗ್ಗೆ ಅರಿವು ಇದೆ. ಆದರೆ ೧೨% ದಷ್ಟು ಮಹಿಳೆಯರಿಗೆ ಪಂಚಾಯತ್‌ಗಳಲ್ಲಿ ಪರಿಶಿಷ್ಟ ಜಾತಿಯ ಜನರ ಅಭಿವೃದ್ಧಿಗಾಗಿ ಅನೇಕ ಯೋಜನೆಗಳಿವೆ ಎಂಬ ಬಗ್ಗೆ ಮಾಹಿತಿಗಳೇ ಇಲ್ಲವಾಗಿದೆ.(ರೇಖಾಚಿತ್ರ ೪.೨.೨)

❖ ಶೇಕಡಾ ೩೧.೪೩ ರಷ್ಟು ಮಹಿಳೆಯರು ಮನೆವಾರ್ತೆಯನ್ನು ಅವಲಂಬಿಸಿರುತ್ತಾರೆ. ಉಳಿದಂತೆ ದಿನಕೂಲಿ ಕಾರ್ಮಿಕರ ಸಂಖ್ಯೆಯೂ ಹಾಗೂ ಖಾಸಗಿ ವಲಯಗಳಲ್ಲಿ ಅರೆಕಾಲಿಕ ನೌಕರರ ಸಂಖ್ಯೆಯು ಹೆಚ್ಚಾಗಿರುವುದನ್ನು ಗಮನಿಸಬಹುದು.(ಕೋಷ್ಟಕ ೪.೩.೧)

❖ ಮಾಹಿತಿದಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಿನಕೂಲಿ ಕಾರ್ಮಿಕರಾಗಿರುವುದರಿಂದ ಅವರ ಮಾಸಿಕ ಆದಾಯ ರೂ.೧೦೦೦ ದಿಂದ ರೂ. ೩೦೦೦ ಗಳು.(ಕೋಷ್ಟಕ ೪.೩.೨)

❖ ೫೦% ದಷ್ಟು ಮಹಿಳೆಯರು ಸ್ವಸಹಾಯ ಸಂಘದ ಸದಸ್ಯರಾಗಿರುತ್ತಾರೆ.

❖ ಮಾಹಿತಿದಾರರಲ್ಲಿ ಹೆಚ್ಚಿನ ಸಂಖ್ಯೆಯ ೩೫.೭೪% ದಷ್ಟು ಮಹಿಳೆಯರು ೫ ಸೆಂಟ್ಸ್‌ನಷ್ಟು ಜಾಗವಿದೆ.(ಕೋಷ್ಟಕ ೪.೩.೪)

❖ ೪೮.೫೭% ದಷ್ಟು ಮಹಿಳೆಯರು ಸ್ವಸಹಾಯ ಸಂಘಗಳಿಂದ ಸಾಲವನ್ನು ಪಡೆದಿರುತ್ತಾರೆ.(ಕೋಷ್ಟಕ ೪.೩.೫)

❖ ಶೆಕಡಾ ೬೮.೫೭ ರಷ್ಟು ಮಹಿಳೆಯರು ವಿವಿಧ ವಲಯಗಳಲ್ಲಿ ದುಡಿಯುತ್ತಿದ್ದಾರೂ ೩೩% ದಷ್ಟು ಮಹಿಳೆಯರಿಗೆ ತಮಗೆ ದೊರೆತಂತಹ ಆದಾಯವನ್ನು ವಿನಿಯೋಗಿಸುವ ಅವಕಾಶಗಳಿಲ್ಲ.( ಕೋಷ್ಟಕ ೪.೪.೧)

❖ ಶೇಕಡಾ ೩೩ ರಷ್ಟು ಮಾಹಿತಿದಾರರು ಕುಟುಂಬ ಯೋಜನೆಯನ್ನು ತಮ್ಮ ಸ್ವಂತ ನಿರ್ಧಾರದಂತೆ ಅಳವಡಿಸಿಕೊಂಡಿರುತ್ತಾರೆ. (ಕೋಷ್ಟಕ ೪.೪.೨)

ಈ ಮೇಲ್ಕಂಡ ವಿಷಯಗಳ ಆಧಾರದ ಮೇರೆಗೆ ವಿಶ್ಲೇಷಿಸುವುದಾದರೆ ಮುಂಡಾಲ ಸಮುದಾಯದ ಮಹಿಳೆಯರು ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿಯೂ ಹಿಂದುಳಿದಿದ್ದಾರೆ ಎಂದು ವಿವರಿಸಬಹುದು. ಅದೇ ರೀತಿ ಪರಿಶಿಷ್ಟ ಮಹಿಳೆಯೆನ್ನುವ ಕಾರಣಕ್ಕಾಗಿ ಸಾಮಾಜಿಕ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ, ಈ ನೆಲೆಯಲ್ಲಿ ಸಮರ್ಪಕವಾದ ಮಾಹಿತಿಯನ್ನು ನೀಡಿ ಅವರನ್ನು ಸಶಕ್ತರನ್ನಾಗಿ ಮಾಡಬೇಕು ಹಾಗೂ ಸಾಮಾಜಿಕವಾಗಿ ಮುಂಡಾಲ ಸಮುದಾಯದ ಮಹಿಳೆಯರ ಸ್ಥಿತಿಗತಿಯು ಸುಧಾರಣೆ ಹೊಂದವಂತಹ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬೇಕಾಗಿದೆ. ಈ ನಿಟ್ಟಿನಲ್ಲಿ ಮುಂದಿನ ವಿಭಾಗದಲ್ಲಿ ಸಲಹೆ ಸೂಚನೆಗಳನ್ನು ನೀಡಲಾಗಿದೆ.

**ಸಲಹೆಗಳು:**

ಮುಂಡಾಲ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ನಡೆಸಿ ಲಭಿಸಿರುವ ಫಲಿತಗಳೂ ಹಾಗೂ ಅವಲೋಕನ ವಿಧಾನದ ಆಧಾರದ ಮೇಲೆ ಈ ಕೆಳಕಂಡ ಸಲಹೆ ಸೂಚನೆಗಳನ್ನು ನೀಡಲಾಗಿದೆ.

- ಮುಂಡಾಲ ಸಮುದಾಯದ ಹೆಣ್ಣು ಮಕ್ಕಳಿಗೆ ಶಿಕ್ಷಣದ ಮಹತ್ವವನ್ನು ತಿಳಿಸುವುದು ಹಾಗೂ ಪದವಿ ಮತ್ತು ಉನ್ನತ ಶಿಕ್ಷಣವನ್ನು ಪಡೆಯುವಲ್ಲಿ ಪ್ರೋತ್ಸಾಹವನ್ನು ನೀಡುವ ಅವಶ್ಯಕತೆಯಿದೆ.
- ವೃತ್ತಿಪರ ತರಬೇತಿಗಳ ಮುಖಾಂತರ ಆರ್ಥಿಕ ಸ್ವಾವಲಂಬನೆಯನ್ನು ಹೆಚ್ಚಿಸುವಂತಹ ಯೋಜನೆಗಳನ್ನು ರೂಪಿಸಬೇಕಾಗಿದೆ.
- ಮುಕ್ತವಾದ ಚರ್ಚೆಗಳಿಗೆ ಅವಕಾಶವಿರುವಂತಹ ತಮ್ಮದೇ ಸಮುದಾಯದ ಮಹಿಳಾ ಸಂಘಟನೆಗಳನ್ನು ಪ್ರಾರಂಭಿಸಬೇಕಾಗಿದೆ.
- ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿಗೆ ವಿವಿಧ ವಿಷಯಗಳ ಮಾಹಿತಿಯ ಕೊರತೆ ಇರುವುದರಿಂದ ಗ್ರಾಮಪಂಚಾಯತ್ ವತಿಯುಂದ ಮಾಹಿತಿ ಕಾರ್ಯಕ್ರಮಗಳನ್ನು ಆಯೋಜಿಸುವುದು ಸೂಕ್ತವೆನಿಸುತ್ತದೆ.

**ಭವಿಷ್ಯದ ಸಂಶೋಧನಾ ಸಾಧ್ಯತೆಗಳು:**

ಒಂದು ಅಧ್ಯಯನದಲ್ಲಿ ಆಯ್ದುಕೊಂಡ ವಿಷಯದ ಬಗ್ಗೆ ಹೊಸ ವಿಷಯಗಳನ್ನು ತಿಳಿಯುವ ಪ್ರಯತ್ನ ಮಾಡಲಾಗುತ್ತದೆ. ಹಾಗೆಯೇ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮುಂದಿನ ಅಧ್ಯಯನಗಳ/ ಸಂಶೋಧನೆಗಳ ಸಾಧ್ಯತೆಯ ಬಗ್ಗೆಯೂ ಹೇಳಬಹುದಾಗಿದೆ. ಈ ನಿಟ್ಟಿನಲ್ಲಿ ಕೆಲವು ಅಧ್ಯಯನಗಳ ಸಾಧ್ಯತೆಗಳು ಈ ಕೆಳಗಿನಂತಿವೆ.

- ➢ ಮುಂಡಾಲ ಸಮುದಾಯಕ್ಕೆ ಸಂಬಂಧಿಸಿದಂತೆ ಒಟ್ಟು ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ನಡೆಸುವ ಸಾಧ್ಯತೆ ಇದೆ.
- ➢ ಮುಂಡಾಲ ಸಮುದಾಯದ ಮಹಿಳೆ ಮತ್ತು ಇತರ ಪರಿಶಿಷ್ಟ ಜಾತಿಯ ಮಹಿಳೆಯರ ಸ್ಥಿತಿಗತಿಯ ಬಗ್ಗೆ ತುಲನಾತ್ಮಕ ಅಧ್ಯಯನದ ಮಾಡಬಹುದಾಗಿದೆ.
- ➢ ಇದೇ ಅಧ್ಯಯನವನ್ನು ಇನ್ನೂ ಹೆಚ್ಚಿನ ಅವಧಿಗೆ ವಿಸ್ತರಿಸಿದರೆ ಮುಂಡಾಲ ಸಮುದಾಯದ ಮಹಿಳೆಯರ ಆರೋಗ್ಯ ಹಾಗೂ ಇತರ ಸಮಸ್ಯೆಗಳ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳಬಹುದು.

**ಉಪಸಂಹಾರ:**

"ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಒಂದು ಅಧ್ಯಯನ" ಎಂಬ ಈ ಅಧ್ಯಯನವು ಮುಂಡಾಲ ಸಮುದಾಯದ ಮಹಿಳೆಯರನ್ನು ನೇರವಾಗಿ ಸಂದರ್ಶನ ನಡೆಸಿ ಪ್ರಸ್ತುತ ಪಡಿಸಿದ ಅಧ್ಯಯನವಾಗಿದೆ.

ಮಹಿಳೆ ಮತ್ತು ಅಭಿವೃದ್ಧಿ ಎನ್ನುವ ವಿಷಯವಾಗಿ ಅನೇಕ ಅಧ್ಯಯನಗಳು ವಿವಿಧ ಸ್ಥರಗಳ ಮಹಿಳೆಯರ ಸ್ಥಿತಿಗತಿ ಹಾಗೂ ಸಮಸ್ಯೆಗಳನ್ನು ನಮಗೆ ಪರಿಚಯಿಸಿವೆ. ಮಹಿಳೆಯರ ಅಧ್ಯಯನಗಳಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಸಾರ್ವತ್ರಿಕ ವಿಶ್ಲೇಷಣೆಗಳನ್ನು ನೋಡಬಹುದು. ಆದರೆ ವಿವಿಧ ಸ್ಥರಗಳ, ಪ್ರದೇಶದ, ಜಾತಿಗಳ ಮಹಿಳೆಯರ ಸ್ಥಿತಿಗತಿ ಹಾಗೂ ಸಮಸ್ಯೆಗಳೂ ಭಿನ್ನವಾಗಿರುತ್ತದೆ. ಅದೇ ರೀತಿ ಕರ್ನಾಟಕದಲ್ಲಿರುವಂತಹ ಪರಿಶಿಷ್ಟ ಜಾತಿ ಸಮುದಾಯಗಳ ಸಮಗ್ರ ಮಾಹಿತಿಗಳು ನಮಗೆ ಸಿಗುತ್ತವೆಯೇ ಹೊರತು, ಆ ಸಮುದಾಯಗಳ ಪೂರ್ಣಪ್ರಮಾಣದ ಮಾಹಿತಿಗಳು ಸಿಗುವುದು ಕಷ್ಟಸಾಧ್ಯ. ಪರಿಶಿಷ್ಟ ಜಾತಿಯ ಜನರ ಸ್ಥಿತಿಗತಿಗಳು ಹಾಗೂ ಸೂಕ್ಷ್ಮತೆಯನ್ನು ಪಡೆಯಬೇಕಾದರೆ ತಳಸ್ಥರದ ಸಮುದಾಯಗಳ ಆಳವಾದ ಅಧ್ಯಯನದ ಅವಶ್ಯಕತೆಯಿದೆ.

ಮುಂಡಾಲ ಮಹಿಳೆಯಲ್ಲಿರುವ ಶೈಕ್ಷಣಿಕ ಸಮಸ್ಯೆಯು ಅವರ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಕಾರಣವಾಗಿದೆ ಎನ್ನುವುದು ಅಧ್ಯಯನದಿಂದ ದಟ್ಟವಾಗಿ ಬಿಂಬಿಸಲ್ಪಡುತ್ತದೆ. ಇದಕ್ಕಾಗಿಯೇ ಬಹುತೇಕ ಮಹಿಳೆಯರು ದಿನಕೂಲಿಯನ್ನವಲಂಬಿಸಿಕೊಂಡಿದ್ದಾರೆ. ಕೃಷಿ ಆಧಾರಿತ ಕೂಲಿ ಕೆಲಸವು ವರ್ಷದ ಎಲ್ಲಾ ದಿನಗಳಲ್ಲಿ ಆದಾಯವನ್ನು ನೀಡುತ್ತಿಲ್ಲ. ಮಿಗಿಲಾಗಿ ಪಂಚಾಯತ್ ಯೋಜನೆಗಳಲ್ಲಿ ಒಂದಾದ ಉದ್ಯೋಗ ಖಾತರಿ ಯೋಜನೆಯಂತಹ ವಿಶೇಷ ಯೋಜನೆಗಳ ಅರಿವು ಎಲ್ಲ ಮಹಿಳೆಯರಿಗೆ ಇಲ್ಲ. ಸರಕಾರಿ ಸವಲತ್ತುಗಳ ಅರಿವಿನ ಕೊರತೆಯು ಒಂದಲ್ಲ ಒಂದು ರೀತಿಯಲ್ಲಿ ಎಲ್ಲಾ ಮಹಿಳೆಯರಲ್ಲಿಯೂ ಕಂಡುಬರುತ್ತದೆ.

ಸಾಮಾಜಿಕ ತಾರತಮ್ಯವೂ ಮುಂಡಾಲ ಮಹಿಳೆಯರು ಎದುರಿಸುತ್ತಿರುವ ಇನ್ನೊಂದು ಸಮಸ್ಯೆ. ಕೆಲಸ ಮಾಡುತ್ತಿರುವ ಹಲವಾರು ಮಹಿಳೆಯರು ಜಾತಿ ಆಧಾರಿತ ತಾರತಮ್ಯವನ್ನು ಅನುಭವಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಅಸ್ಪೃಶ್ಯತೆಯ ಕೆಲವು ರೂಪಗಳನ್ನು ಕಾಣಬಹುದಾಗಿದೆ. ಈ ಕುರಿತು ದನಿಯೆತ್ತುವ ಶಕ್ತಿಯು ಇವರಲ್ಲಿ ಇಲ್ಲ. ಸಾಮಾಜಿಕ ಅಸಮಾನತೆಯನ್ನು ಪ್ರತಿಭಟಿಸಿದಲ್ಲಿ ತಾವು ಮಾಡುತ್ತಿರುವ ಕೂಲಿ ಕೆಲಸವನ್ನು ಕಳೆದುಕೊಳ್ಳುತ್ತೇವೆನ್ನುವ ಭಯ ಅನೇಕ ಮಹಿಳೆಯರಲ್ಲಿದೆ. ಹೀಗಾಗಿ ಮೌನವಾಗಿಯೇ ಹಲವಾರು ಸಮಸ್ಯೆಗಳನ್ನು ಮುಂಡಾಲ ಮಹಿಳೆಯರು ಎದುರಿಸುತ್ತಿದ್ದಾರೆ.

ಕರಾವಳಿ ಜಿಲ್ಲೆಯಲ್ಲಿರುವಂತಹ ಪರಿಶಿಷ್ಟ ಜಾತಿ ಸಮುದಾಯವಾದ ಮುಂಡಾಲ ಸಮುದಾಯವು, ಇತ್ತೀಚಿನ ದಿನಗಳಲ್ಲಿ ಸಮಾಜದ ಮುಖ್ಯವಾಹಿನಿಗೆ ಬರುವಲ್ಲಿ ಪ್ರಯತ್ನಪಡುತ್ತಿದೆ. ಮುಂಡಾಲ ಸಮುದಾಯದ ಮಹಿಳೆಯರು ಸಶಕ್ತೀಕರಣಗೊಳ್ಳಲು ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯಲ್ಲಿ ಬದಲಾವಣೆಗಳನ್ನು ತರಬೇಕಾಗಿದೆ. ತಮ್ಮ ಸಮಸ್ಯೆಗಳನ್ನು ವಿಮರ್ಶೆ ಮಾಡುವಂತಹ ಮನೋಭಾವ ಅವರಲ್ಲಿ ಬೆಳೆದು ಪರಿಹಾರಗಳನ್ನು ಕಂಡುಕೊಳ್ಳುವಂತಹ ಬೆಳವಣಿಗೆ ಇನ್ನು ಆಗಬೇಕಾಗಿದೆ.

ಈ ನಿಟ್ಟಿನಲ್ಲಿ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ ಎಂದು ಹೇಳಬಹುದು. ಉತ್ತಮವಾದ ಶಿಕ್ಷಣ ಹಾಗೂ ಸಂಘಟಿತ ಮನೋಭಾವ ಇದ್ದಲ್ಲಿ ಖಂಡಿತವಾಗಿಯೂ ಮುಂಡಾಲ ಸಮುದಾಯದ ಮಹಿಳೆಯಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ.

## ಕರ್ನಾಟಕದಲ್ಲಿರುವ ಪರಿಶಿಷ್ಟ ಜಾತಿ/ ಉಪಜಾತಿಗಳ ವಿವರ

| ಕ್ರ.ಸಂ | ಜಾತಿಯ ವಿವರ | ಕ್ರ.ಸಂ | ಜಾತಿಯ ವಿವರ | ಕ್ರ.ಸಂ | ಜಾತಿಯ ವಿವರ |
|---|---|---|---|---|---|
| ೧ | ಆದಿ ಆಂಧ್ರ | | ಮಲ್ಕಾನ | | ಒಡ್ಡೆ |
| ೨ | ಆದಿ ದ್ರಾವಿಡ | | ಹಲಾಲ್ಖೋರ್ | | ಒಡ್ಡರ್ |
| ೩ | ಆದಿ ಕರ್ನಾಟಕ | | ಲಾಲ್ ಬೇಗಿ | | ಒಡ್ಡ್ಡರ್ |
| ೪ | ಅಡಿಯ | | ಬಾಲ್ಮೀಕಿ | | ವಡ್ಡರ್ |
| ೫ | ಅಗೇರ್ | | ಕೊರರ್ | | ವಡ್ಡರ್ |
| ೬ | ಅಜಿಲ | | ಜಾಡ್ಮಾಲಿ | ೨೪ | ಬಿಂಡ್ಲಾ |
| ೭ | ಅನಾಮಿಕ್ | ೨೨ | ಭಂಬಿ | | |
| ೮ | ಅರೆಮಾಲ | | ಭಾಂಬಿ | | |
| ೯ | ಅರುಂಧತಿಯರ್ | | ಅಸಾಡರು | ೨೫ | ಬ್ಯಾಗಾರ್ |
| ೧೦ | ಅರ್ವ್ವಮಾಲ | | ಆಸೋಡಿ | ೨೬ | ಚಕ್ಕಲಿಯನ್ |
| ೧೧ | ಬೈರ | | ಚಮ್ಮಡಿಯ | ೨೭ | ಚಲವಾದಿ |
| ೧೨ | ಬಕಡ | | ಚಮಾರ್ | | ಚೆಲ್ವಾದಿ |
| ೧೩ | ಬಂಟ್ | | ಚಂಭಾರ್ | | ಚನ್ನಯ್ಯ |
| ೧೪ | ಬಕುಡ | | ಚಮಗಾರ್ | ೨೮ | ಚಂಡಾಲ |
| ೧೫ | ಬಲಗೈ | | ಹರಳಯ್ಯ | ೨೯ | ಚೆನ್ನದಾಸರ್ |
| ೧೬ | ಬಾಂದಿ | | ಹರಳಿ | | ಹೊಲಯ ದಾಸರ್ |
| ೧೭ | ಬಂಜಾರ | | ಖಾಲ್ಪ | ೩೦ | ಡಕ್ಕಲ್ |
| | ಲಂಬಾಣಿ | | ಮಾಚಿಗಾರ್ | | ಡೊಕ್ಕಲ್ ವಾರ್ |
| | ಲಂಬಾಡ | | ಮೋಚಿ ಗಾರ್ | ೩೧ | ದಕ್ಕಲಿಗ |
| | ಲಂಬಾಡಿ | | ಮಾದರ್ | ೩೨ | ಧೋರ್ |
| | ಲಮಾಣಿ | | ಮಾದಿಗ | | ಕಕ್ಕಯ್ಯ |
| | ಸುಗಾಲಿ | | ಮೋಚಿ | | ಕಂಕಯ್ಯ |
| | ಸುಕಾಲಿ | | ಮೂಚಿ | ೩೩ | ಡೋಮ್ |
| ೧೮ | ಬತಡ | | ತೆಲುಗು ಮೋಚಿ | | ದೊಂಬರ |
| ೧೯ | ಬೇಡ ಜಂಗಮ | | ಕಾಮಾಟಿ ಮೋಚಿ | | ಪೈಡಿ |
| | ಬುಡ್ಗ ಜಂಗಮ | | ರಾಣೆಗಾರ್ | | ಪಾನೊ |
| ೨೦ | ಬೆಲ್ಲಾರ | | ರೋಹಿದಾಸ್ | ೩೪ | ಎಲ್ಲಮಾಲ್ವಾರ್ |
| ೨೧ | ಭಂಗಿ | | ರೋಹಿತ್ | | ಯಲ್ಲಮ್ಮಲವಾಂಡ್ಲು |
| | ಮೆಹ್ತರ್ | | ಸಮಗಾರ್ | ೩೫ | ಘಂಟಿ ಚೋರರು |
| | ಒಲ್ಗಾನ | ೨೩ | ಭೋವಿ | ೩೬ | ಗರೋಡ |
| | ರುಖಿ | | ಒಡ್ | | ಗರೋ |

| | | | | | |
|---|---|---|---|---|---|
| ೩೭ | ಗೊಡ್ಡ | ೫೭ | ಕುರುವನ್ | | ಮೇಂಘ್ವಾರ್ |
| ೩೮ | ಗೋಸಂಗಿ | ೫೮ | ಲಿಂಗದರ್ | ೭೮ | ಮೊಗೇರ್ |
| ೩೯ | ಹಳ್ಳೀರ್ | ೫೯ | ಮಾಚಲ | ೭೯ | ಮುಕ್ರಿ |
| ೪೦ | ಹಲ್ಸರ್ | ೬೦ | ಮಾದರಿ | ೮೦ | ಮುಂಡಾಲ |
| | ಹಸ್ಲರ್ | ೬೧ | ಮಾದಿಗ | ೮೧ | ನಾಡಿಯ |
| | ಹುಲಸ್ವಾರ್ | ೬೨ | ಮಹರ್ | | ಹಾಡಿ |
| | ಹಲಸ್ವಾರ್ | | ತರಳ್ | ೮೨ | ನಲ್ಕೆದಾಯ |
| ೪೧ | ಹಂದಿ ಜೋಗಿಗಳು | | ಧೇಗು ಮೇಗು | ೮೩ | ನಲ್ಕೆಯುವ |
| ೪೨ | ಹಸಲ | ೬೩ | ಮಹ್ಯಮಂಶಿ | ೮೪ | ನಾಯಡಿ |
| ೪೩ | ಹೊಲಾರ್ | | ದೇಡ್ | ೮೫ | ಪಾಲೆ |
| | ವಲ್ ಹಾರ್ | | ವಂಕರ್ | ೮೬ | ಪಲ್ಲನ್ |
| ೪೪ | ಹೊಲಯ | | ಮಾರು ವಂಕರ್ | ೮೭ | ಪಂಬದ |
| | ಹೊಲೇರ್ | ೬೪ | ಮ್ಯೆಲ | ೮೮ | ಪಂಚಮ |
| | ಹೊಲೆಯ | ೬೫ | ಮಾಲ | ೮೯ | ಪಣ್ಣಿಯಾಂಡಿ |
| ೪೫ | ಹೊಲೆಯದಾಸರಿ | ೬೬ | ಮಾಲ ದಾಸರಿ | ೯೦ | ಪರ್ಯೆಯಾನ್ |
| ೪೬ | ಜಗ್ಗಲಿ | ೬೭ | ಮಾಲ ಹನ್ನೈ | | ಪರಯ |
| ೪೭ | ಜಾಂಬುವಲು | ೬೮ | ಮಾಲ ಜಂಗಂ | ೯೧ | ಪರವನ್ |
| ೪೮ | ಕಡೇಯನ್ | ೬೯ | ಮಾಲ ಮಾಸ್ತಿ | ೯೨ | ರಾಣೆಯರ್ |
| ೪೯ | ಕಲ್ಲಡಿ | ೭೦ | ಮಾಲ ಸಾಲೆ | ೯೩ | ಸಮಗಾರ |
| ೫೦ | ಕೇಪ್ ಮಾರಿಗಳು | | ನೆಟ್ಯಾಣಿ | ೯೪ | ಸಾಂಬನ್ |
| ೫೧ | ಕೊಲುಪುಲ ವಾಂಡ್ಲು | ೭೧ | ಮಾಲ ಸನ್ಯಾಸಿ | ೯೫ | ಸಪಾರಿ |
| ೫೨ | ಕೂಸ | ೭೨ | ಮಾಂಗ್ | ೯೬ | ಶಿಳ್ಳೆಕ್ಯಾತರು |
| ೫೩ | ಕೊರಚ | | ಮಾತಂಗ್ | ೯೭ | ಸಿಂದೊಳ್ಳು |
| | ಕೊರಚರ್ | | ಮಿನಿಮಾದಗ್ | | ಚಿಂದೊಳ್ಳು |
| ೫೪ | ಕೊರಮ | ೭೩ | ಮಾಂಗ್ ಗಾರುಡಿ | ೯೮ | ಸುಡುಗಾಡು ಸಿದ್ಧ |
| | ಕೊರವ | | ಮಾಂಗ್ ಗರೋಡಿ | ೯೯ | ತೋಟಿ |
| | ಕೊರವರ್ | ೭೪ | ಮೆನ್ನೆ | ೧೦೦ | ತೀರ್ಗಾರ್ |
| ೫೫ | ಕೋಟೆಗಾರ್ | ೭೫ | ಮಾಸ್ತಿ | | ತೀರ್ಬಂದ |
| | ಮೇತ್ರಿ | ೭೬ | ಮಾವಿಲನ್ | ೧೦೧ | ವಳ್ಳುವನ್ |
| ೫೬ | ಕುಡುಂಬಿನ್ | ೭೭ | ಮೇಘ್ವಾಪ್ | | |

- ಸಂವಿಧಾನ (ಅನುಸೂಚಿತ ಜಾತಿಗಳು)ಆದೇಶ ೧೯೫೦

# ಪ್ರಶ್ನಾವಳಿ

## ಉಡುಪಿ ತಾಲೂಕಿನ ಮುಂಡಾಲ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ

1. ಹೆಸರು
2. ವಯಸ್ಸು: ೧. 20-30 ೨. 31-40 ೩. 41-50 ೪. 51-60
3. ಶಿಕ್ಷಣ:೧. ಅನಕ್ಷರಸ್ಥರು ೨. ಪ್ರಾಥಮಿಕ ೩. ಪ್ರೌಢಶಾಲೆ/ಎಸ್.ಎಸ್.ಎಲ್.ಸಿ ೪. ಪಿಯುಸಿ ೫. ಡಿಗ್ರಿ ೬. ಉನ್ನತ ಶಿಕ್ಷಣ ೭.-----
4. ವೈವಾಹಿಕ ವಿವರ:೧.ವಿವಾಹಿತೆ ೨. ಅವಿವಾಹಿತೆ ೩. ವಿಧವೆ
5. ಕುಟುಂಬದ ವಿವರ: ೧. ಅವಿಭಕ್ತ ಕುಟುಂಬ ೨. ವಿಭಕ್ತ ಕುಟುಂಬ
6.

| ಹೆಸರು | ವಯಸ್ಸು | ಮಾಹಿತಿದಾರನೊಂದಿಗೆ ಸಂಬಂಧ | ಶಿಕ್ಷಣ | ಉದ್ಯೋಗ | ಮಾಸಿಕ ಆದಾಯ |
|---|---|---|---|---|---|
| | | | | | |
| | | | | | |
| | | | | | |
| | | | | | |
| | | | | | |
| | | | | | |

**ಸಾಮಾಜಿಕ ಅಂಶಗಳು**

7. ತಮ್ಮ ನೆರೆಮನೆಗಳಲ್ಲಿ ವಾಸಿಸುವ ಜಾತಿ ಸಮುದಾಯಗಳು ಯಾವುವು ?
8. ಎಲ್ಲಾ ಜಾತಿಯವರ ಮನೆಗಳಿಗೆ ಮುಕ್ತ ಪ್ರವೇಶವಿದೆಯೇ? ೧. ಹೌದು ೨. ಇಲ್ಲ
9. ನಿಮ್ಮ ಆರಾಧ್ಯ ದೈವ ಯಾವುದು?
10. ನಿಮ್ಮ ಜಾತಿ ಸಮುದಾಯದಲ್ಲಿ ಕುಲದೇವರು ಎಂಬ ಕಲ್ಪನೆ ಇದೆಯೇ? ೧. ಹೌದು ೨. ಇಲ್ಲ

11.ಹೌದಾದರೆ ನಿಮ್ಮ ಕುಲ ದೇವರು ಯಾರು?

12.ಜಾತಿ ಮೀಸಲಾತಿಯ ಕುರಿತು ನಿಮಗೆ ಅರಿವಿದೆಯೇ? ೧. ಹೌದು ೨. ಇಲ್ಲ

13.ಈವರೆಗೆ ನೀವು ಯಾವುದೇ ರೀತಿಯ ಮೀಸಲಾತಿ ಪಡೆದುಕೊಂಡಿದ್ದಿರಾ? ೧. ಹೌದು ೨. ಇಲ್ಲ

14.ಹೌದಾದರೆ ಯಾವ ನೆಲೆಯಲ್ಲಿ? ೧. ಶಿಕ್ಷಣ ೨. ಉದ್ಯೋಗ ೩. ರಾಜಕೀಯ

15.ನೀವು ಯಾವುದೇ ರೀತಿಯ ಸಾಮಾಜಿಕ ತಾರತಮ್ಯವನ್ನು ಬೇರೆ ಸಮುದಾಯದವರಿಂದ ಅನುಭವಿಸಿದ್ದಿರಾ? ೧. ಹೌದು ೨. ಇಲ್ಲ

16.ಹೌದಾದರೆ ಯಾವ ಪ್ರಕಾರದ್ದು?

17.ನೀವು ನಿಮ್ಮ ವಿವಾಹದಲ್ಲಿ ಯಾವುದೇ ರೀತಿಯ ವರದಕ್ಷಿಣೆ ನೀಡಿರುತ್ತಿರಾ? ೧. ಹೌದು ೨. ಇಲ್ಲ ೩. ಅನ್ವಯಿಸುವುದಿಲ್ಲ

18.ಹೌದಾದರೆ ಯಾವ ರೂಪದಲ್ಲಿ? ೧.ಹಣ ೨. ಜಮೀನು ೩. ವಾಹನ ೪. ಇತರೆ ೫. ಅನ್ವಯಿಸುವುದಿಲ್ಲ

19.ಸರಕಾರಿ ಸವಲತ್ತುಗಳ ಅರಿವು ಇದೆಯೇ? ೧. ಹೌದು ೨. ಇಲ್ಲ

20.ಹೌದಾದರೆ ತಿಳಿದುಕೊಂಡಿರುವುದು ಹೇಗೆ? ೧. ಮನೆಯವರಿಂದ ೨. ಪಂಚಾಯತ್ ಸದಸ್ಯರಿಂದ ೩. ಸ್ಥಳೀಯ ನಾಯಕರಿಂದ ೩. ಇತರ ಮೂಲಗಳಿಂದ

21.ಈವರೆಗೆ ಯಾವುದಾದರು ಸವಲತ್ತುಗಳನ್ನು ಬಳಸಿಕೊಂಡಿದ್ದಿರಾ? ೧. ಹೌದು ೨. ಇಲ್ಲ

22.ಹೌದಾದರೆ ಬಳಸಿಕೊಂಡ ಸವಲತ್ತುಗಳ ಬಗ್ಗೆ ವಿವರ.

23.ಸ್ಥಳೀಯ ಆಡಳಿತದಲ್ಲಿ ಭಾಗವಹಿಸಿದ್ದಿರಾ? ೧. ಹೌದು ೨. ಇಲ್ಲ

24.ಭಾಗವಹಿಸಿದ್ದರೆ ವಿವರ ಕೊಡಿ. ೧. ಗ್ರಾಮ ಪಂಚಾಯತ್ ೨. ತಾಲೂಕು ಪಂಚಾಯತ್ ೩. ಜಿಲ್ಲಾ ಪಂಚಾಯತ್

25.ಹೌದಾದರೆ ನಿಮಗೆ ಪ್ರೇರಣೆ ಯಾರು? ೧. ಮನೆಯವರು ೨. ನೆರೆಮನೆಯವರು ೩. ಮಿತ್ರರು ೪. ಇತರರು(ಉಲ್ಲೇಖಿಸಿ)

26.ಮಹಿಳಾ ಮಂಡಲಗಳಲ್ಲಿ ಸದಸ್ಯತ್ವ ಇದೆಯೇ ? ೧. ಹೌದು ೨. ಇಲ್ಲ

**ಆರ್ಥಿಕ ಅಂಶಗಳು:**

1. ಉದ್ಯೋಗ:
2. ಮಾಸಿಕ ಆದಾಯ:
3. ಕುಲಕಸಬು:
4. ಹೆತ್ತವರ ಉದ್ಯೋಗ:
5. ಮನೆಯ ಒಡೆತನ: ೧. ಸ್ವಂತ ೨. ಬಾಡಿಗೆ ೩. ಗೇಣಿಯಿಂದ
6. ಮನೆಯ ಪ್ರಕಾರ? ೧. ಗುಡಿಸಲು ೨. ಹೆಂಚು ೩. ಆರ್.ಸಿ.ಸಿ
7. ಹೊಂದಿರುವ ಸ್ವಂತ ಜಮೀನಿನ ವಿವರ. ೧----ಸೆಂಟ್ಸ್ ೨. ----ಎಕರೆ
8. ಕ್ರಷಿ ಭೂಮಿ ಆಗಿದ್ದಲ್ಲಿ ಬೆಳೆಸುವ ಬೆಳೆ?೧. ಭತ್ತ ೨. ಅಡಿಕೆ ೩. ತೆಂಗು ೪. ಕಬ್ಬು ೫. ಬಾಳೆ ೬. ಇತರೆ ೭. ಅನ್ವಯಿಸುವುದಿಲ್ಲ
9. ನಿಮ್ಮ ಆದಾಯದಲ್ಲಿ ಉಳಿತಾಯ ಮಾಡುತ್ತಿರಾ? ೧. ಹೌದು ೨. ಇಲ್ಲ
10. ಹೌದಾದರೆ ಎಲ್ಲಿ? ೧. ಬ್ಯಾಂಕ್ ೨. ಅಂಚೆಕಛೇರಿ ೩. ಸ್ವಸಹಾಯ ಸಂಘದ ನಿಧಿ ೪. ಇತರೆ
11. ನೀವು ಏನಾದರು ಸ್ವ ಉದ್ಯೋಗ ಮಾಡುತ್ತಿರಾ? ೧. ಹೌದು ೨. ಇಲ್ಲ
12. ಹೌದಾದರೆ ಯಾವ ಪ್ರಕಾರದ್ದು ಉಲ್ಲೇಖಿಸಿ?
13. ಸ್ವಸಹಾಯ ಸಂಘಗಳಲ್ಲಿ ಸದಸ್ಯತ್ವ ಇದೆಯೇ? ೧. ಹೌದು ೨. ಇಲ್ಲ
14. ನೀವು ಯಾವುದೇ ರೀತಿಯ ಸಾಲ ಪಡೆದಿರುವಿರಾ? ೧. ಹೌದು ೨. ಇಲ್ಲ
15. ಪಡೆದಿದ್ದರೆ ಎಲ್ಲಿಂದ?೧. ಬ್ಯಾಂಕ್ ೨. ಸಹಕಾರಿ ಸಂಘ ೩. ಸ್ವಸಹಾಯ ಸಂಘ ೪. ಫೈನಾನ್ಸ್ ೫. ಇತರೆ
16. ಸಾಲ ಪಡೆಯಲು ಕಾರಣ:

**ಸಬಲೀಕರಣದ ಆಯಾಮ:**

17. ಮಕ್ಕಳ ಶಿಕ್ಷಣದ ನಿರ್ಧಾರ ನೀವು ತೆಗೆದುಕೊಳ್ಳುವಿರಾ?೧. ಇದೆ ೨. ಇಲ್ಲ ೨. ಅನ್ವಯಿಸುವುದಿಲ್ಲ
18. ಮಕ್ಕಳನ್ನು ಶಾಲೆಗೆ ದಾಖಲಾತಿ ಮಾಡುವ ನಿರ್ಧಾರ ನಿಮ್ಮದಾಗಿದೆಯೇ? ೧. ಇದೆ ೨. ಇಲ್ಲ ೨. ಅನ್ವಯಿಸುವುದಿಲ್ಲ
19. ಮದುವೆಯ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು ಇದೆಯೇ? ೧. ಹೌದು ೨. ಇಲ್ಲ

20.ಮಕ್ಕಳ ಮದುವೆಯ ಬಗ್ಗೆ ನಿರ್ಧರಿಸುವ ಹಕ್ಕು ಇದೆಯೇ? ೧. ಇದೆ ೨. ಇಲ್ಲ ೨. ಅನ್ವಯಿಸುವುದಿಲ್ಲ

21.ಸಾಮಾಜಿಕ ಸಮಾರಂಭಗಳಲ್ಲಿ ಭಾಗವಹಿಸುತ್ತಿರಾ? ೧. ಹೌದು ೨. ಇಲ್ಲ

22. ಹೌದಾದರೆ ಯಾವ ಪ್ರಕಾರದ ಸಭೆ ಸಮಾರಂಭಗಳಲ್ಲಿ?

23.ಉದ್ಯೋಗಕ್ಕೆ ಸೇರ್ಪಡೆಗೊಳ್ಳುವ ನಿರ್ಧಾರ? ೧. ಇದೆ ೨. ಇಲ್ಲ

24. ಗೃಹೋಪಯೋಗಿ ವಸ್ತುಗಳನ್ನು ಖರೀದಿಸುವ ಬಗ್ಗೆ ನೀವು ನಿರ್ಧಾರಗಳನ್ನು ತೆಗೆದುಕೊಳ್ಳುವಿರಾ?
೧.ಹೌದು ೨. ಇಲ್ಲ

25. ನಿಮ್ಮ ಆದಾಯದ ಮೊತ್ತವನ್ನು ನಿಮ್ಮಿಷ್ಟದಂತೆ ವಿನಿಯೋಗಿಸುವಿರಾ? ೧. ಹೌದು ೨. ಇಲ್ಲ

26. ಮಕ್ಕಳಿಗೆ ರೋಗನಿರೋದಕ ಲಸಿಕೆ ಹಾಕಿಸುವ ನಿರ್ಧಾರ ನಿಮ್ಮದೇ? ೧.ಹೌದು೨. ಇಲ್ಲ ೨. ಅನ್ವಯಿಸುವುದಿಲ್ಲ

27. ನೀವು ಕುಟುಂಬ ಯೋಜನೆ ಅಳವಡಿಸಿಕೊಂಡಿದ್ದಿರಾ? ೧.ಹೌದು ೨. ಇಲ್ಲ ೨. ಅನ್ವಯಿಸುವುದಿಲ್ಲ

28.ಹೌದಾದರೆ ನಿರ್ಧಾರ ಯಾರದ್ದು?೧. ಸ್ವಂತ ೨. ಗಂಡನದ್ದು ೩. ೨. ಅನ್ವಯಿಸುವುದಿಲ್ಲ

29.ವಿಷಯದ ಅರಿವು ಪಡೆಯುವ ಮೂಲ?೧. ರೇಡಿಯೋ ೨. ಟಿ.ವಿ ೩.ದಿನಪತ್ರಿಕೆ ೩. ಇತರೆ

30.ಮತ ಚಲಾವಣೆ ಮಾಡಿರುತ್ತಿರಾ? ೧.ಹೌದು ೨. ಇಲ್ಲ

31.ನೀವು ಈವರೆಗೆ ಯಾವುದೇ ರೀತಿಯ ಕೌಟುಂಬಿಕ ದೌರ್ಜನ್ಯವನ್ನು ಅನುಭವಿಸಿದ್ದಿರಾ? ೧.ಹೌದು೨. ಇಲ್ಲ

32.ಹೌದಾದರೆ ಕೌಟುಂಬಿಕ ದೌರ್ಜನ್ಯದ ವಿಧ:೧. ನಿಂದನೆ ೨. ದೈಹಿಕ ಪೀಡನೆ ೩. ಅತಿಯಾದ ಕೆಲಸ

33.ನೀವು ಯಾವುದೇ ರೀತಿಯ ಅನಾರೋಗ್ಯಕ್ಕೆ ಒಳಗಾಗಿದ್ದಿರಾ? ೧.ಹೌದು೨. ಇಲ್ಲ ( ವಿವರ:

34.ಅನಾರೋಗ್ಯವಾದಲ್ಲಿ ಈ ಕೆಳಗಿನವುಗಳಲ್ಲಿ ಯಾವುದಕ್ಕೆ ಅವಲಂಬಿತರಾಗುತ್ತೀರಿ? ೧. ಆಸ್ಪತ್ರೆ ೨. ಮನೆಮದ್ದು

35.ಎದುರಿಸುತ್ತಿರುವ ಸಮಸ್ಯೆಗಳು?

೧.ಕೌಟುಂಬಿಕ ನೆಲೆಯಲ್ಲಿ:

೨. ಸಾಮಾಜಿಕ ನೆಲೆಯಲ್ಲಿ:

**ಪರಾಮರ್ಶನ ಗ್ರಂಥಗಳು:**

1. ಪಿ.ಕಮಲಾಕ್ಷ , ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ , ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೪,
2. ಮಂಜೇಶ್ವರ ಗಣಪತಿ ರಾವ್ ಐಗಳ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ , ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ,೧೯೨೩
3. ಡಾ|ಆರ್.ಇಂದಿರಾ, ಮಹಿಳೆ, ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
4. ಡಾ| ಟಿ.ಆರ್.ಚಂದ್ರಶೇಖರ್, ಮಹಿಳೆಯರ ನಿಯೋಗ ಮತ್ತು ಸಾಮಾಜಿಕ ಬದಲಾವಣೆ, ಅಭಿವೃದ್ಧಿ ಅಧ್ಯಯನ, ಸಮಾಜ ವಿಜ್ಞಾನ ಪತ್ರಿಕೆ, ಸಂಪುಟ ೨, ಸಂಚಿಕೆ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
5. ಸುನಿತಾ ಆರ್ಯ 'ದಲಿತ್ ಆಂಡ್ ಬ್ಯಾಕ್‌ವರ್ಡ್ ವಿಮೆನ್' ಎಡುಕೇಶನಲ್ ಪಬ್ಲಿಕೇಶರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್, ನ್ಯೂ ದೆಹಲಿ ೨೦೧೦
6. ಜೋನಾಥನ್ ಪಿ ರವರ ಲೇಖನ 'ಸೋಶಿಯಲ್ ಪ್ರೊಟೆಕ್ಷನ್ ಆಂಡ್ ಸೋಶಿಯಲ್ ರಿಲೇಶನ್ಸ್ : ಎವಿಡೆನ್ಸ್ ಫ್ರೊಮ್ ಶೆಡ್ಯೂಲ್ಡ್ ಕಾಸ್ಟ್ ವಿಮೆನ್ ಅಸೋಶಿಯೇಶನ್ ಇನ್ ರೂರಲ್ ಸೌತ್ ಇಂಡಿಯಾ'೨೦೧೧
7. ಡಾನ ದನ್; ಜಂಡರ್ ಇನ್ ಇಕ್ವ್ಯಾಲಿಟಿ ಇನ್ ಎಡುಕೇಶನ್ ಆಂಡ್ ಎಂಪ್ಲಾಯ್ ಮೆಂಟ್ ಇನ್ ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಇಂಡಿಯಾ; ಪಾಪಲೇಶನ್ ರಿಸರ್ಚ್ ಆಂಡ್ ಪಾಲಿಸಿ ರಿವಿವ್; ೧೯೯೩
8. ಕರುಣಾ ಚನ್ನಾ; ಅಸೆಸಿಂಗ್ ಹೈಯರ್ ಎಡುಕೇಶನ್; ದಿ ಡೈಲಮಾ ಆಫ್ ಸ್ಕೂಲಿಂಗ್ ವಿಮೆನ್, ಮೈನೋರಿಟೀಸ್, ಶೆಡ್ಯೂಲ್ಡ್ ಕಾಸ್ಟ ಆಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಕನ್‌ಟೆಂಪರರೀ ಇಂಡಿಯಾ; ವಾಲ್ಯೂಮ್ ೨೬;೧೯೯೩
9. ಕಾರಡೆ, ಜಗನ್; ಅಕ್ಯುಪೇಶನ್ ಮೊಬಿಲಿಟಿ ಆಮ್ಯೋಂಗ್ ಶೆಡ್ಯೂಲ್ಡ್ ಕಾಸ್ಟ ಇನ್ ಇಂಡಿಯಾ; ಕೇಮ್‌ಬ್ರಿಡ್ಜ್ ಸ್ಕೋಲರ್ಸ್ ಪಬ್ಲಿಶಿಂಗ್ ಯು.ಕೆ ೨೦೦೯
10. ಬಿ.ಯು.ಸುಮಾ, ದಲಿತ ಮಹಿಳೆ ಬದಲಾಗುತ್ತಿರುವ ರೂಪಕ, ಪ್ರಜಾವಾಣಿ ಪತ್ರಿಕೆ, ಎಪ್ರಿಲ್ ೧೭, ೨೦೧೨

11. ಡಾ। ಟಿ.ಆರ್.ಚಂದ್ರಶೇಖರ್,ಕರ್ನಾಟಕದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಗಣತಿ ವಿವರಗಳು, ಅಭಿವೃದ್ಧಿ ಅಧ್ಯಯನ, ಸಂಪುಟ ೩, ಸಂಚಿಕೆ ೩,.೨೦೦೫

12. ಡಾ। ಡಿ. ಆರ್. ಪಾಂಡುರಂಗ, ದಕ್ಷಿಣ ಕನ್ನಡ ಜಿಲ್ಲೆಯ ಭೈರರು, ಸಾಹಿತ್ಯಿಕ-ಸಾಂಸ್ಕೃತಿಕ ಅಧ್ಯಯನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ , ಉಡುಪಿ.

13. ಪಿ.ಗುರುರಾಜ್ ಭಟ್, ತುಳುನಾಡು, ಸಾಮಾಜಿಕ ಚರಿತ್ರೆಯಲ್ಲಿ ಒಂದು ಸಂಶೋಧನಾತ್ಮಕ ವಿವೇಚನೆ, ಭವ್ಯವಾಣಿ, ಉಡುಪಿ.

14. ಎಂ.ಚಂದ್ರಪೂಜಾರಿ, ಸಂಶೋಧನೆ ಏನು? ಏಕೆ? ಹೇಗೆ?, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ,೨೦೦೯

15. ಎಂ.ವಿ.ನಡಕರ್ನಿ, ಪರ್ಸ್ಪೆಟ್ಟಿವ್ ಆನ್ ದಲಿತ್ ಪ್ರೋಬ್ಲಮ್ಸ್ ಆಂಡ್ ಸೊಲ್ಯೂಶನ್ಸ್, ಜರ್ನಲ್ ಆಪ್ ಸೋಶಿಯಲ್ ಆಂಡ್ ಇಕನಾಮಿಕ್ ಡೆವಲೆಪ್‌ಮೆಂಟ್, ವಾಲ್ಯೂಮ್ ೭, ಇನ್ಸಿಟೂಟ್ ಪಾರ್ ಸೋಷಿಯಲ್ ಆಂಡ್ ಎಕಾನಾಮಿಕ್ ಚೇಂಜ್,೨೦೦೫

16. ಡಾ। ಜೆ.ಫೆಡ್ರಿಕ್, ಎನ್.ಕಣ್ಣನ್,ಪೈನಾಶಿಯಲ್ ಇನ್‌ಕ್ಲೂಶನ್ ಆಫ್ ಶೆಡ್ಯೂಲ್ ವಿಮೆನ್ ತ್ರೂ ಮೈಕ್ರೋ ಪೈನಾನ್ಸ್,ತರ್ಡ್ ಕಾನ್ಸೆಪ್ಟ್,ಆನ್ ಇನ್‌ಟರ್‌ನ್ಯಾಶನಲ್ ಜರ್ನಲ್ ಆಪ್ ಐಡಿಯಾಸ್,ವಾಲ್ಯೂಮ್ ೨೬, ಎಪ್ರಿಲ್ ೨೦೧೨

17. ತಾಪಾಶ್ ಕುಮಾರ್ ಬಿಸ್ವಾಸ್, ಮೆಜರಿಂಗ್ ವಿಮೆನ್ ಎಮ್‌ಪವರ್‌ಮೆಂಟ್ -ಸಮ್ ಮೆತಡಲೋಜಿಕ ಇಶ್ಯೂಸ್, ಕಪಾರ್ಟ್ ಓರಿಎಂಟೇಶನ್ ಪ್ರೋಗ್ರಾಮ್, ನ್ಯಾಶನಲ್ ಇನ್ಸಿಟ ಟೂಶನ್ ಆಪ್ ರೂರಲ್ ಡೆವಲಫ್‌ಮೆಂಟ್, ಹೈದರಬಾದ್,೨೦೦೫

18. ರೂರಲ್ ಡೆವೆಲಪ್‌ಮೆಂಟ್ ರಿಪೋರ್ಟ್, ನ್ಯಾಶನಲ್ ಇನ್ಸಿಟೂಶನ್ ಆಪ್ ರೂರಲ್ ಡೆವಲಫ್‌ಮೆಂಟ್, ಹೈದರಬಾದ್,೨೦೦೫

19. ಶೋಭಾಮಣಿ, ಗ್ರಾಮೀಣ ಮಹಿಳಾ ಸಬಲೀಕರಣದಲ್ಲಿ ಉದ್ಯಮಶೀಲತೆಯ ಪಾತ್ರ, ಒಂದು ಪ್ರಕರಣ ಅಧ್ಯಯನ, ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ ೨೦೦೯

20. ಡಾ।ಟಿ.ಆರ್.ಚಂದ್ರಶೇಖರ್,ಕುಸಿಯುತ್ತಿರುವ ಮಕ್ಕಳ ಲಿಂಗಾನುಪಾತ, ಅಭಿಪ್ರಾಯ, ವಿಜಯಕರ್ನಾಟಕ ದಿನ ಪತ್ರಿಕೆ, ೨೩ ಮಾರ್ಚ್,೨೦೧೨

21. ಎಡ್ಗರ್ ಥರ್‌ಸ್ಟನ್, ಕಾಸ್ಟ್ ಆಂಡ್ ಟ್ರೈಬ್ಸ್ ಸೌತ್ ಇಂಡಿಯಾ,ವಾಲ್ಯೂಮ್ ೫, ಕೋಸ್ಮೊ ಪಬ್ಲಿಕೇಶನ್ ನ್ಯೂ ದೆಹಲಿ, ೧೯೦೯

22. ಡಾ। ಟಿ.ಆರ್.ಚಂದ್ರಶೇಖರ್, ಡಾ।ಎ.ಮೋಹನ್ ಕುಂಟಾರ್, ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ,೨೦೦೮
23. ಡಾ।ಅಂಜು ಮಲ್ಹೋತ್ರ,ಮೆಜರಿಂಗ್ ವಿಮೆನ್ ಎಂಪವರ್‌ಮೆಂಟ್ ಆಸ್ ಎ ವೇರಿಯೇಬಲ್ ಇನ್ ಇನ್‌ಟರ್‌ನ್ಯಾಶನಲ್ ಡೆವಲಪ್‌ಮೆಂಟ್, ವರ್ಕಶಾಪ್ ಆನ್ ಪಾವರ್ಟೀ ಆಂಡ್ ಜಂಡರ್,೨೦೦೨
24. ಶಶಿ ಕೌಲ್, ಶ್ರದ್ಧಾ ಸಹ್ನಿ, ಸ್ಟಡೀ ಆನ್ ದಿ ಪಾರ್ ಟಿಸಿಪೇಶನ್ ಆಪ್ ವಿಮೆನ್ ಇನ್ ಪಂಚಾಯತ್ ರಾಜ್ ಇನ್ಸ್ಟಿಟೂಶನ್ಸ್ , ಡಿಪಾರ್ಟಮೆಂಟ್ ಆಪ್ ಕಮುನಿಟಿ ರಿಸೋರ್ಸ್ ಮ್ಯಾನೇಜ್ ಮೆಂಟ್, ೨೦೦೯
25. ಡಾ।ಟಿ.ಆರ್.ಚಂದ್ರಶೇಖರ್,ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಬಿವೃದ್ಧಿ (ಜಾಲತಾಣ : ಕಣಜ.ಇನ್, ವರ್ತಮಾನ.ಕಾಮ್)
26. ಡಾ।ವೀಣಾ ಪ್ರಸಾದ್, ಮಹಿಳಾ ಸಬಲೀಕರಣ, (ಜಾಲತಾಣ:ಕೆಂಡ ಸಂಪಿಕೆ.ಕಾಮ್) ೨೧ ನವೆಂಬರ್,೨೦೧೦
27. ಶೌರೀಶ್ ಕುದ್ಕಳ್ಳಿ, ಶೋಷಿತ ತಳಹದಿಯಲ್ಲಿ ದಲಿತ ಸಮುದಾಯ, ಜನಪರ ವೇದಿಕೆ,ಎಪ್ರಿಲ್ ೩, ೨೦೦೯
28. ಆಶಾಲತಾ ಸಿ.ಕೆ, ಮೊಗೇರ ಸಂಸ್ಕೃತಿಯಲ್ಲಿ ಮಹಿಳೆ, ಸಂಸ್ಕೃತಿ ಮಹಿಳಾ ಮಾಲಿಕೆ, ಕರ್ನಾಟಕ ಸಾಹಿತ್ಯ ಅಕಾಡಮಿ(ಜಾಲತಾಣ : ಕಣಜ.ಇನ್)
29. ಕರ್ನಾಟಕ ಸ್ಟೇಟ್ ಗಜೆಟಿಯರ್,ಸೌತ್ ಕೆನರ ಡಿಸ್ಟ್ರಿಕ್, ಗವರ್ನ್‌ಮೆಂಟ್ ಆಫ್ ಕರ್ನಾಟಕ ಪಬ್ಲಿಕೇಶನ್,೧೯೭೩
30. ಜಿಲ್ಲಾ ಮಾನವ ಅಭಿವೃದ್ಧಿ ಮಾಹಿತಿ, ಉಡುಪಿ, ಕರ್ನಾಟಕ ೨೦೦೮
31. ಜನಗಣತಿ ವರದಿ–೨೦೦೧
32. ಜಾಲತಾಣಗಳು:

www.kanaja.in

www.google.com

